## ತಿರುಮಲ ತಿರುಪತಿ ದೇವಸ್ಥಾನಗಳು, ತಿರುಪತಿ.

# ಶ್ರೀ ಪದ್ಮಾವತೀ ಅಮ್ಮನವರ ನಿತ್ಯ ಅನ್ನಪ್ರಸಾದ ಯೋಜನೆ

ಭಕ್ತರ ಹಾಗೂ ದಾನಿಗಳ ದಾನಸ್ವೀಕರಣೆಯಿಂದ ಶ್ರೀ ಪದ್ಮಾವತೀ ಅಮ್ಮನವರ ನಿತ್ಯ ಅನ್ನಪ್ರಸಾದ ಯೋಜನೆಯನ್ನು ಆರಂಭಗೊಳಿಸಲಾಗಿದೆ.

ಈ ಯೋಜನೆಗೆ ದಾನ ನೀಡಬಯಸುವ ಭಕ್ತರು ರೂ 50,000/- ಅಥವಾ ಅದರ ಗುಣಕಗಳಲ್ಲಿ ನೀಡಬಹುದು. ವ್ಯಕ್ತಿ/ಇಬ್ಬರಿಗೆ ಮೀರದಂತೆ, ಒಂದು ಕುಟುಂಬ / ಎರಡು ಕಂಪನಿ ಅಥವಾ ಉದ್ದಿಮೆಗಳು - ಈ ದಾನಗಳನ್ನು ನೀಡಬಹುದು ಅವರಿಗೆ ದೊರೆಯುವ ಸೌಲಭ್ಯಗಳು ಹೀಗಿರುತ್ತವೆ-

1. ದಾನಿಗಳ ಹೆಸರನ್ನು ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ಆಲಯದಲ್ಲಿ ಐದು ವರ್ಷ ಗಳು ಪ್ರಧಾನವಾಗಿ ಎದ್ದು ಕಾಣುವಂತೆ ಬರೆದು ಇಡಲಾಗುವುದು.
2. ಶ್ರೀ ಪದ್ಮಾವತೀ ಅಮ್ಮನವರ ಆಲಯದಲ್ಲಿ ಐದು ವರ್ಷಗಳ ಅರ್ಚನೆಯ ಸಮಯದಲ್ಲಿ ದಾನಿಗಳ ಗೋತ್ರವನ್ನು ಹೇಳಲಾಗುವುದು.
3. ಶ್ರೀ ಪದ್ಮಾವತೀ ಅಮ್ಮನವರ ಆಲಯದಲ್ಲಿ ಐದು ವರ್ಷಗಳ ಕಾಲ ವರ್ಷಕ್ಕೆ ಒಂದು ಸಲ ಸರ್ವದರ್ಶನ ಸಮಯದಲ್ಲಿ ವಿಶೇಷ ಪ್ರವೇಶದ ಮೂಲಕ ಐದುಮಂದಿಗೆ ಉಚಿತ ದರ್ಶನವನ್ನು ಏರ್ಪಡಿಸಲಾಗುವುದು.
4. ದಾನಿಗಳು ಮೊದಲಬಾರಿಗೆ ಶ್ರೀ ಪದ್ಮಾವತೀ ಅಮ್ಮನವರನ್ನು ದರ್ಶಿಸಲು ಬಂದಾಗ ಅವರಿಗೆ ಒಂದು ಅಂಗವಸ್ತ್ರವನ್ನು ಬಹೂಕರಿಸಲಾಗುವುದು.

ಭಕ್ತರು ರೂ. 1000/- (ಒಂದು ಸಾವಿರ ರೂಪಾಯಿ) ಹಾಗೂ ಗುಣಕಗಳಲ್ಲಿ ಸಹ ಶ್ರೀ ಪದ್ಮಾವತೀ ಅಮ್ಮನವರ ನಿತ್ಯ ಅನ್ನಪ್ರಸಾದ ಯೋಜನೆಗೆ ದಾನಗಳನ್ನು ನೀಡಬಹುದು ಅವರಿಗೆ ವರ್ಷಕ್ಕೆ ಒಮ್ಮೆ ಒಬ್ಬರಿಗೆ ಉಚಿತ ದರ್ಶನವನ್ನು ಏರ್ಪಡಿಸಿ ಶ್ರೀ ಪದ್ಮಾವತೀ ಅಮ್ಮನವರ ಆಶೀರ್ವಾದದೊಡನೆ ಕುಂಕುಮ ಪ್ರಸಾದವನ್ನು ನೀಡಲಾಗುವುದು.

ಈ ಯೋಜನೆಗೆ ದಾನವಾಗಿ ನೀಡಬಹುದಾದ ಕನಿಷ್ಠ ಧನರಾಶಿ ಯೆಂದರೆ ರೂ. 1000/- (ಒಂದು ಸಾವಿರ ರೂಪಾಯಿ) ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಡಿ.ಡಿ. ಯನ್ನು ಪಡೆದು, ಸಹಾಯಕ ಕಾರ್ಯನಿರ್ವಹಣಾಧಿಕಾರಿ, ಶ್ರೀ ಪದ್ಮಾವತೀ ಅಮ್ಮನವರ ಆಲಯ, **ತಿರುಚಾನೂರು - ಚಿತ್ತೂರುಜಿಲ್ಲೆ - 517 503** - ಈ ವಿಳಾಸಕ್ಕೆ ಕಳುಹಿಸಬಹುದು. ರೂ. 1000/- ಕ್ಕಿಂತ ಕಡಿಮೆ ಮೊತ್ತದ ಧನದಾನಗಳನ್ನು ದಾನಿಗಳಿಗೆ ಯಾವುದೇ ನಿರೂಪಣೆಯನ್ನೂ ನೀಡದೆ ಶ್ರೀ ಪದ್ಮಾವತೀ ಅಮ್ಮನವರ ನಿತ್ಯಾನ್ನ ಪ್ರಸಾದ ಯೋಜನೆಯಲ್ಲಿ ಸೇರಿಸಲಾಗುವುದು.

ಈ ಯೋಜನೆಯ ಹೆಚ್ಚಿನ ವಿವರಗಳನ್ನು ಪಡೆಯಬಹುದಾದ ವಿಳಾಸ -

**ಸಹಾಯಕ ಕಾರ್ಯನಿರ್ವಹಣಾಧಿಕಾರಿ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ**
**ತಿರುಚಾನೂರು - 517 503**
**ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ್.**

**ಕಾರ್ಯನಿರ್ವಹಣಾಧಿಕಾರಿ,**
**ತಿ. ತಿ. ದೇವಸ್ಥಾನಗಳು.**



ಗರುಡ ಗಮನ ಬಂದನೊ ನೋಡಿರೋ ಬೇಗ ||ಪ||

ಗರುಡ ಗಮನ ಬಂದ ಧರಣಿಯಿಂದೊಪ್ಪುತ
ಕರೆದು ಬಾರೆನ್ನುತ ವರಗಳ ಬೀರುತ ||ಅ.ಪ||

ಎನ್ನ ರಕ್ಷಿಪ ಧೊರೆ ಇಲ್ಲಿಗೆ ತಾ ಬಂದ
ಚೆನ್ನವ ಪೋಲುವ ವಿಹಂಗಜ ರಥದಲಿ
ಘನ್ನ ಮಹಿಮ ಬಂದ ಅಭಿನ್ನ ಮೂರುತಿ ಬಂದ
ಸಣ್ಣ ಕೃಷ್ಣ ಬಂದ ಬೆಣ್ಣೆ ಕಳ್ಳ ಬಂದ ||೧||

ಪಕ್ಷಿವಾಹನ ಬಂದ ಲಕ್ಷ್ಮೀಪತಿಯು ಬಂದ
ಕುಕ್ಷಿ ಯೊಳಗೆ ಜಗವನ್ನಿಟ್ಟವಬಂದ
ಸೂಕ್ಷ್ಮ ಸ್ಥೂಲದೊಳು ಇಪ್ಪನು ತಾಬಂದ
ಸಾಕ್ಷಿಭೂತನು ಅವ ಸರ್ವೇಶ್ವರನು ಬಂದ ||೨||

ತಂದೆ ಪುರಂದರ ವಿಠಲರಾಯಬಂದ
ಬಂದು ನಿಂತು ನಲಿದಾಡಿದನು
ಸಿಂಧುಶಯನ ಬಂದ ಅಂದು ಸಾಂದೀಪನ
ನಂದನ ತಂದಿತ್ತಾನಂದ ಮೂರುತಿ ಬಂದ ||೩||

- ಶ್ರೀ ಪುರಂದರ ದಾಸರು.

ಸಂದರ್ಶಿಸಿ ಆರಾಧಿಸಿ ಆನಂದಿಸಿ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

# ತಿರುಚಾನೂರು



# ವಾರ್ಷಿಕ ಬ್ರಹ್ಮೋತ್ಸವಗಳು

## 5-12-99 ರಿಂದ 13-12-99 ವರೆಗೆ

ಉತ್ಸವ ಕಾರ್ಯಕ್ರಮ

| ದಿನಾಂಕ | ವಾರ | ಹಗಲು ಉತ್ಸವ | ರಾತ್ರಿ ಉತ್ಸವ |
|---|---|---|---|
| 4-12-99 | ಶನಿವಾರ | | ಅಂಕುರಾರ್ಪಣೆ |
| | | | ಸೇನಾಪತಿ ಉತ್ಸವ |
| 5-12-99 | ಭಾನುವಾರ | ಧ್ವಜಾರೋಹಣ | ಚಿಕ್ಕಶೇಷವಾಹನ |
| 6-12-99 | ಸೋಮವಾರ | ದೊಡ್ಡಶೇಷವಾಹನ | ಹಂಸವಾಹನ |
| 7-12-99 | ಮಂಗಳವಾರ | ಮುತ್ತಿನಚಪ್ಪರವಾಹನ | ಸಿಂಹವಾಹನ |
| 8-12-99 | ಬುಧವಾರ | ಕಲ್ಪವೃಕ್ಷವಾಹನ | ಹನುಮದ್‌ವಾಹನ |
| 9-12-99 | ಗುರುವಾರ | ಪಲ್ಲಕ್ಕಿ ಉತ್ಸವ | ಗಜವಾಹನ |
| | | ಸಂಜೆ : ವಸಂತೋತ್ಸವ | |
| 10-12-99 | ಶುಕ್ರವಾರ | ಸರ್ವಭೂಪಾಲವಾಹನ | ಗರುಡೋತ್ಸವ |
| 11-12-99 | ಶನಿವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 12-12-99 | ಭಾನುವಾರ | ರಥೋತ್ಸವ | ಅಶ್ವವಾಹನ |
| 13-12-99 | ಗುರುವಾರ | ಚಕ್ರಸ್ನಾನ, ಪಂಚಮಿತೀರ್ಥ | ಧ್ವಜಾವರೋಹಣ |

ಸೂಚನೆ : ತಿರುಚಾನೂರು ತಿರುಪತಿಯಿಂದ ಐದು ನಿಮಿಷದ ಬಸ್ ಹಾದಿ. ಒಂದರ ಹಿಂದೊಂದು ಬಸ್‌ಗಳು ಲಭ್ಯ. ಬ್ರಹ್ಮೋತ್ಸವ ದಿನಗಳಲ್ಲಿ ಸಾಂಸ್ಕೃತಿಕಾರ್ಯಕ್ರಮಗಳುಂಟು.

ನೀವೂ ಬನ್ನಿ ತಿ.ತಿ.ದೇ. ನಿಮ್ಮವರನ್ನೂ ಕರೆತನ್ನಿ




वेंकटाद्रि समं स्थानं ब्रह्माण्डे नास्ति किंचन — 

**ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ**
**ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ**


ಸಂಪುಟ 30 ಡಿಸೆಂಬರ್ 1999 ಸಂಚಿಕೆ -7




ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ ತಿ ದೇ ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು

**ಬಿಡಿ ಪ್ರತಿ 4-00**
**ವಾರ್ಷಿಕ ಚಂದಾ 48-00**



## ವಿಷಯಸೂಚಿ


| | | |
|---|---|---|
| ಸಂಪಾದಕೀಯ | | 4 |
| ದಿವ್ಯಪ್ರಬಂಧ | ಪ್ರೊ|| ಸಿ. ಗೋವಿಂದಾಚಾರ್ಯ | 5 |
| ದ್ವಯಮಂತ್ರ | ವಿದ್ವಾನ್ ರಘುಸುತ | 9 |
| ಪರಾಶಕ್ತಿಯ ಪಂಚಾವತಾರ | ಕೆ. ಜಗನ್ನಾಥ ಶಾಸ್ತ್ರೀ | 13 |
| ಧರ್ಮ | ಡಾ|| ಎಚ್. ವಿ. ನರಸಿಂಹಮೂರ್ತಿ | 19 |
| ಕಠೋಪನಿಷತ್ | ಎಂ. ಸಿ. ರಾಮರಾವ್ | 21 |
| ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ | ಡಾ|| ಎನ್. ರಮೇಶನ್ | 24 |
| ನವರಾತ್ರಿ ಬ್ರಹ್ಮೋತ್ಸವ | ವರದಿ | 27 |
| ಬ್ರಹ್ಮೋತ್ಸವದಲ್ಲಿ ದಾಸಸಾಹಿತ್ಯ | ವರದಿ | 32 |
| ಗಾಯನ ಭಜನೆ | | 37 |


*ಮುಖಚಿತ್ರ* ಶ್ರೀ ಪದ್ಮಾವತೀ ಅಮ್ಮನವರು - ತಿರುಚಾನೂರು.
*ಹಿಂಬದಿಯಲ್ಲಿ* ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಆಲಯ.

# ಸಂಪಾದಕೀಯ

ಭಗವಂತ ಹೇಳಿದ - ಎಲ್ಲ ಧರ್ಮವನ್ನೂ ಬಿಟ್ಟು ನನ್ನಲ್ಲಿ ಶರಣಾಗತನಾಗು,ನಾನು ನಿನಗೆ ಮೋಕ್ಷವನ್ನು ನೀಡುತ್ತೇನೆ ಯೋಚನೆ ಮಾಡಬೇಡ ಇದೊಂದು ಭರವಸೆ ಸರ್ವಧರ್ಮಾನ್ ಪರಿತ್ಯಜ್ಯ ಅನ್ನುವಾಗ - ಬೇಕೆಂತಲೇ ಎಲ್ಲವನ್ನೂ ಬಿಟ್ಟುಬಿಡು - ಉದ್ದೇಶ ಪೂರ್ವಕವಾಗಿ ಬಿಟ್ಟುಬಿಡು - ಎಂದೇನು ಅರ್ಥವಲ್ಲ. ಧರ್ಮ ಏನೆಂಬುದನ್ನು ಎಳೆ ಎಳೆಯಾಗಿ, ಅಧ್ಯಾಯ ಅಧ್ಯಾಯವಾಗಿ ಅರ್ಜುನನ ಅರಿವಿಗೆ ಎಟುಕುವ ರೀತಿಯಲ್ಲಿ ಅಂದಿಗೆ ಸರಳವೆನ್ನಿಸುವ ರೀತಿಯಲ್ಲಿ ವಿವರಿಸಿದ್ದಾದ ಮೇಲೆ ಪಾರ್ಥನ ಪರಿಮಿತ ಬುದ್ಧಿಯಲ್ಲಿ ಅನುಮಾನಗಳ ಅಲೆಗಳು ಏಳುತ್ತಲೇ ಇರುತ್ತವೆ ಎಂಬುದನ್ನು ತಿಳಿದ ಕೃಷ್ಣ ಕೊನೆಯ ಮಾರ್ಗವನ್ನು ವಿವರಿಸುತ್ತ ಹೇಳಿದ ಮಾತುಗಳಿವು. ಧರ್ಮದ ಬಗ್ಗೆ ಗೊಂದಲಗ ಳುಂಟಾದಾಗ ಗಮ್ಯದ ಬಗ್ಗೆ ಗುಮಾನಿಯಾದಾಗ ಚಿಂತೆ ಪಡಬೇಡ - ಮಾಶುಚಃ - ನಾನು ನಿನ್ನನ್ನು ಎಲ್ಲ ಪಾಪಗಳಿಂದ ಮುಕ್ತನನ್ನಾಗಿಸುತ್ತೇನೆ - ನನ್ನಲ್ಲಿ ಶರಣಾಗತನಾಗು ಎಂದ

ಇಲ್ಲಿ ಪ್ರಶ್ನೆ ನಮಗೆ ಅರ್ಥವಾಗುವುದೆಷ್ಟು, ದೈವೀಕವಾದ ಯೋಜನೆಗಳ ವೈಶಾಲ್ಯದ ಹರಹು ನಮ್ಮ ಭೌತಿಕ ನಯನಗಳಿಗೆ ಎಟುಕದೆ ಹೋಗಬಹುದು ಆದರೂ ಧರ್ಮವನ್ನು ಅರಿವಿಗೆಟುಕಿದಷ್ಟು ಆಚರಣೆಗೆ ತರುವುದರಲ್ಲಿ ಅಭ್ಯಂತರವಿರದು ಕೈಲಾದಷ್ಟು ಕೆಲಸವೆಸಗುವ - ಮಿಕ್ಕದ್ದನ್ನು 'ಅವನಿಗೆ' ಬಿಡುವ ಎಂಬುದರಲ್ಲಿಯೇ ಮನುಷ್ಯ ಜೀವ ನದ ಸಾರ್ಥಕ್ಯ - ಎನ್ನುವುದನ್ನು ಶೂಡಿ ಕೊಡುತ್ತ ನಾಚ್ಚಿಯಾರ್ ಎಂದು ಹೆಸರಾದ ಗೋದಾದೇವಿ - ಆಂಡಾಳ್ ತನ್ನ ಜೀವನ ಸಾಹಿತ್ಯಗಳ ಮೂಲಕ ತಿಳಿಸಿಕೊಡುತ್ತಾಳೆ ಎಂದರೆ ಅತಿಶಯೋಕ್ತಿಯಲ್ಲ

ಗೋದೆ ಪೆರಿಯಾಳ್ವಾರರ ಪುತ್ರಿ. ತ್ರಿಭುವನ ಸ್ವಾಮಿಯನ್ನು ಪತಿಯಾಗಿ ಪಡೆಯುವ ಅಪೇಕ್ಷೆ ಪಟ್ಟು ಕನಸು ಕಂಡವಳು ತನ್ನ ಕನಸಿನ ಸಾಕ್ಷಾತ್ಕಾರಕ್ಕಾಗಿ ಮಾರ್ಗಳಿ (ಮಾರ್ಗಶಿರ) ಮಾಸದ ಕಾತ್ಯಾಯನೀ ವ್ರತವನ್ನು ಅವಲಂಬಿಸಿ ದಳು ತಾನು ಮಾಡಬೇಕಾದ ಕೆಲಸಗಳನ್ನು ಮಾಡಿ 'ಅವನ' ಅನುಗ್ರಹ ಪಡೆಯಲು ಪ್ರಯತ್ನಿಸಿದಳು.

ಆಂಡಾಳ್ ತನ್ನ ಒಡೆಯನನ್ನು ತಾನು ಪಡೆಯುವ ಯತ್ನದಲ್ಲಿ ಮತ್ತೂ ಒಂದು ಅದ್ಭುತವಾದ ಕಾರ್ಯವನ್ನು ಮಾಡಿದ್ದುಂಟು ಅದೆಂದರೆ ಮಹಿಳಾ ಜಾಗೃತಿ ಆಕೆ ಅಂದು ಬೆಳಗಿನ ಜಾವದಲ್ಲಿ ಎದ್ದು - ತಾನು ವ್ರತ ಮಾಡುವು ದನ್ನು ಅನುಸರಿಸಲು ತನ್ನ ಸಖಿಯರನ್ನೂ ಎಚ್ಚರಿಸಿದುದನ್ನು ಹಲವು ಸ್ತರಗಳಲ್ಲಿ ಅರ್ಥೈಸಬಹುದಾಗಿದೆ ಪರಮಾತ್ಮನ ಹೊರತು ಮಿಕ್ಕವರೆಲ್ಲ - ಜೀವಾತ್ಮಗಳೆಲ್ಲ - ಸ್ತ್ರೀ ಪ್ರಾಯರೆಂದು, ಎಲ್ಲರನ್ನೂ ದೈವದ ಚಿಂತನೆಗೆ ಎಬ್ಬಿಸುವುದು ಒಂದಾ ದರೆ, ತನ್ನ ಜೊತೆಯ ಇತರ ಹೆಂಗಸರನ್ನು ವ್ರತ ಮಾಡುವ ಉದ್ಯಮದಲ್ಲಿ ತೊಡಗಿಸಲು ಎಚ್ಚರಿಸುವುದು ಇನ್ನೊಂದು ಆ ಮೂಲಕವಾಗಿಯೇ ಮಹಿಳೆಯರನ್ನೂ ಮುಕ್ತಿ ಕಾಮನೆಗೆ ಸಿದ್ಧಗೊಳಿಸುವುದು ಮುಖ್ಯ ಆಗುತ್ತದೆ ದೈವ ಸಾಕ್ಷಾ ತ್ಕಾರಕ್ಕೆ ಆದ್ಯತೆಯಿದ್ದರೂ, ಇಹ ಜೀವನವೂ ಅಷ್ಟೇ ಮುಖ್ಯವಾಗುತ್ತದೆ ಗೋದಾದೇವಿಯ ಮಾತುಗಳಲ್ಲಿಯೇ ವ್ರತವಿಧಾನ ಸರಿಯಿದ್ದರೆ ಫಲವೂ ಪೂರ್ಣವಾಗಿ ದೊರೆಯಲು ಸಾಧ್ಯ ಎಂದಾಗ ಜೀವನ ವಿಧಾನ, ಭಗವಂತನ ಕಡೆ ತಿರುಗಿದ ಎಚ್ಚರ - ಇಹದ ಮೋಹದ ನಿದ್ರೆಯಲ್ಲ - ಮುಖ್ಯವಾಗುತ್ತದೆ. ಎಂದಾಗ ಇಪ್ಪತ್ತನೆಯ ಶತಮಾನದ ಕೊನೆ ಯಂಚಿನಲ್ಲಿ ನಿಂತಿರುವ ಇಂದಿನ ಪರಿಸ್ಥಿತಿಯಲ್ಲಿ ಮಹಿಳೆಯರ ಜಾಗೃತಿಗೆ ಗೋದಾದೇವಿ ನೀಡಿದ ಅವಧಾರಣೆಯ ಬಗ್ಗೆ ಆಸಕ್ತಿಕಾರಕವಾಗಿ ಯೋಚಿಸಲು ಅವಕಾಶವಾಗುತ್ತದೆ

ಹೀಗಾಗಿ ಬದುಕು ಸುಖವಾಗಿ ಸಾಗಲಿಕ್ಕೆ ಸ್ವಾಮಿಯ ಮಾತುಗಳನ್ನೂ, ಸ್ವಾಮಿಯ ಭಕ್ತರ ಮಾತುಗಳನ್ನೂ ಸಮರ್ಪಕವಾಗಿ ಬಳಸಿಕೊಳ್ಳುವ ಸ್ಫೂರ್ತಿಯನ್ನು ಈ ಮಾರ್ಗಳಿ ಮಾಸದ ಗೀತಾ ಜಯಂತಿಯಂದು ಪಡೆಯಲು ಪ್ರಯ ತ್ನಿಸುವುದಾದರೆ ಅದಕ್ಕಿಂತ ಶ್ರೇಯಸ್ಸು ಯಾವುದಿರಲು ಸಾಧ್ಯ, ಆದ್ದರಿಂದ ಗೋದಾದೇವಿಯನ್ನೂ ಗೋವಿಂದನನ್ನೂ ಒಟ್ಟಿಗೆ ನಮಿಸಲು ಅನುಕೂಲವಾದರೆ ಅದು ಸಂತಸಕರವೂ ಹೌದು

☆ ☆ ☆

# ದಿವ್ಯಪ್ರಬಂಧ

- ಪ್ರಾ|| ಸಿ. ಗೋವಿಂದಾಚಾರ್.

ಅರ್ಥ ವಿವರಣೆ : ಭಗವಂತನನ್ನು ಕುರಿತು ದ್ರಾವಿಡ ಸಂತಮಹಾನರುಗಳಾದ ಆಳ್ವಾರರು ತಮಿಳು ಭಾಷೆಯಲ್ಲಿ ಮಾಡಿರುವ ಸ್ತುತಿಯನ್ನು 'ಆಳ್ವಾರ್ ಪಾಡಲ್' 'ದ್ರಾವಿಡ ವೇದ' ಎಂದು ಕರೆಯುವರು. ಭಗವಂತನ ಬಗ್ಗೆ ದಿವ್ಯಜ್ಞಾನವನ್ನು ಕಂಡುಕೊಳ್ಳುವ ಸಾಹಿತ್ಯವಾದ್ದರಿಂದಲೂ, ಸರ್ವಾಕರ್ಷರೀತಿಯ ಶಬ್ದಗಳ ಸೇರ್ಪಡೆಯಿಂದಲೂ ಈ ಸೂಕ್ತಿಗಳನ್ನು 'ದಿವ್ಯಪ್ರಬಂಧ' ಎಂದೂ ಮತ್ತು ಈ ಗಾಥೆಗಳಲ್ಲಿ ಉಲ್ಲೇಖಿಸಿರುವ ವಿಷ್ಣು ಕ್ಷೇತ್ರಗಳನ್ನು 'ದಿವ್ಯಕ್ಷೇತ್ರ', 'ದಿವ್ಯದೇಶ' ಆಳ್ವಾರ್ ಪಾಡಲ್ ಕ್ಷೇತ್ರ ಎಂದು ಕರೆಯುವರು.



ಉಗಮ : ಆಳ್ವಾರರ ವಾಣಿಯಿಂದ ತಮಿಳು ಭಾಷೆಗೆ ಮಹತ್ವ ಉಂಟಾಗಿದೆ. ಇವರಿಂದ ತಮಿಳು ಸಾಹಿತ್ಯದಲ್ಲಿ ಭಕ್ತಿಯ ಮೂಲವನ್ನು ಕಾಣುವ ಅವಕಾಶ ಉಂಟಾಯಿತು. ಇಂಥಾ ಭಕ್ತಿ ಸಾಹಿತ್ಯದ ಉಗಮ ಮತ್ತು ಪ್ರಗತಿಗೆ ವಿಷ್ಣು ದೇವಸ್ಥಾನಗಳೇ ಪ್ರೇರಕ. ಈ ಸಂತರು ಭಕ್ತಿಗೀತೆಗಳನ್ನು ನಿಷ್ಕೃಷ್ಟವಾದ ಆರಾಧ್ಯ ದೈವಗಳನ್ನು ಕುರಿತು ಗೀತೆಗಳನ್ನು ರಚಿಸಿ ಹಾಡಿಕೊಂಡಾಡಿರುವರು. ಮುಂದೆ ಆಳ್ವಾರರು ಅವತರಿಸುವರು ಎಂದು ಭಾಗವತದಲ್ಲಿ [XI - 5 - 38 W$ 40] ಹಿಂದೆಯೇ ಹೇಳಿರುತ್ತೆ. ಅಂದರೆ ಭಗವಂತನ ಸಂಕಲ್ಪದಂತೆಯೇ ಆಳ್ವಾರರ ಮತ್ತು ಅವರ ಕೃತಿಗಳ ಅವತಾರವಾಯಿತು. ಭಗವಂತನ ಕೃಪೆ ಇಲ್ಲದಿದ್ದಲ್ಲಿ ತಮಿಳು ಒಂದು ಪೈಶಾಚಿಕ ಭಾಷೆಯಾಗುತ್ತಿತ್ತು ಎಂದು ಅಗಸ್ತ್ಯ ಋಷಿ ದೃಷ್ಟಾಂತದಿಂದ ತಿಳಿದುಬರುತ್ತೆ. "ನಿನ್ನ ತಮಿಳು ಭಾಷೆ ಪೈಶಾಚಿಕ ಭಾಷೆಗೆ ಸಮನಾಗಲಿ" ಎಂದು ವಿಶ್ವಕರ್ಮನು ಅಗಸ್ತ್ಯ ಋಷಿಗೆ ಶಾಪಕೊಡುವನು. ತ್ವದೀಯ ದ್ರಾಮಿಡೀ ಭಾಷಾ ಪೈಶಾಚ ಭಾಷಾ ತುಲ್ಯಾ ಸ್ವಾದಿತಃ - ವ್ಯಸನದಲ್ಲಿದ್ದ ಋಷಿ ಅನ್ನಾಹಾರ ನಿದ್ರೆಗಳನ್ನು ತೊರೆದು ಭಗವಂತನನ್ನು ಪ್ರಾರ್ಥಿಸಲು 'ಆಳ್ವಾರರ ಸೂಕ್ತಿಗಳಿಂದ ಸಂಸ್ಕೃತ ಭಾಷೆಯಂತೆ ತಮಿಳು ಭಾಷೆಗೂ ಪೂಜ್ಯತೆ ಬರುವುದು' ಎಂದು ಭಗವಂತನು ಋಷಿಗೆ ಅಭಯವನ್ನಿತ್ತು ದಿವ್ಯ ಪ್ರಬಂಧದ ಹುಟ್ಟಿಗೆ ಸಂಕಲ್ಪಿಸಿದ. ಇಂದಿನ ತಿರುಕ್ಕೋಯಿಲೂರ್ ಕ್ಷೇತ್ರದಲ್ಲಿ ಅಂದು ಒಂದು ಸಣ್ಣ ಜಗುಲಿಯ ಮೇಲೆ (ದೇಹಳಿ) ಮೂವರು ಭಕ್ತರು (ಮೊದಲಾಳ್ವಾರರು) ಜಾಗವಿಲ್ಲದೆ ಇಕಟ್ಟಿನಲ್ಲಿದ್ದಾಗ ಭಗವಂತನು ತ್ರಿವಿಕ್ರಮನಾಗಿ ನಾಲ್ಕನೆಯವನಾಗಿ ಇವರ ಮಧ್ಯೆ ಸಂಭವಿಸಿದ. ಸ್ಪರ್ಶದ ಮಹಿಮೆಯಿಂದ ಬಂದಿರುವವನು ಭಗವಂತನೇ ಎಂದು ಆ ಭಕ್ತರಿಗೆ ತಿಳಿಯಿತು ಹಾಡುಗಳನ್ನು ಅಲ್ಲೇ ರಚಿಸಿ ಭಗವಂತನನ್ನು ವಿವಿಧ ರೀತಿಯಲ್ಲಿ ಕೊಂಡಾಡಿದರು ಆತ್ಮ ಸಂತೋಷಕ್ಕಾಗಿ ತಮ್ಮ ಆನಂದವನ್ನು ಹಾಡಿನ ರೂಪದಲ್ಲಿ ತೋಡಿಕೊಂಡು ಆ ದಿವ್ಯಾನುಭವವನ್ನು ತಮ್ಮಲ್ಲೇ ಇಟ್ಟುಕೊಳ್ಳಲಾಗದೆ ಲೋಕಕ್ಕೆಲ್ಲಾ ವ್ಯಾಪಕವಾಗಿ ಕಲ್ಯಾಣವಾಗಲಿ ಎಂಬ ದೃಷ್ಟಿಯಿಂದ ತಮ್ಮ ಮಧುರ ವಾಣಿಯನ್ನು ಸಾಹಿತ್ಯ ರೂಪದಲ್ಲಿ ಚಿತ್ರಿಸಿದರು.

ದ್ರಾವಿಡದೇಶದಲ್ಲಿ ಅವತರಿಸಿದ ದಿವ್ಯಪ್ರಬಂಧವು ಉತ್ತರ ಭಾರತದಲ್ಲಿ ಪ್ರಾಚೀನವಾಗಿ ಬಂದಿದ್ದ ವಾಸುದೇವ ಮತ, ಭಾಗವತ ಪಂಥಗಳಿಗೆ ಒತ್ತುಕೊಟ್ಟಿತು. ಭಾಗವತ - ಭಗವದ್ಗೀತೆಗಳಲ್ಲಿರುವ ಪ್ರಧಾನ ವಿಷಯವಾದ ವಿಷ್ಣುಭಕ್ತಿಯು ಆಳ್ವಾರರ ಗಾಥೆಗಳಿಂದ ವ್ಯಾಪಕವಾಗಲು ಅವಕಾಶವಾಯಿತು. ವಿಷ್ಣುವೇ ನಾರಾಯಣ, ನಾರಾಯಣನೇ ವಾಸುದೇವ. ವಾಸುದೇವನೇ ಶ್ರೀಕೃಷ್ಣ ಎಂಬುದಾಗಿ ವಿಷ್ಣುಭಕ್ತಿ ಹರಡಿತು

ಧ್ಯೇಯೋದ್ದೇಶಗಳು : ಭಕ್ತಿ ಮತ್ತು ಪ್ರಾರ್ಥನೆಯೇ ದಿವ್ಯ ಪ್ರಬಂಧದ ಹೆಗ್ಗುರಿಯಾಗಿದೆ. ಸಂಸ್ಕೃತ ಬಾರದವರಿಗೆ ಭಗವದ್ವಿಷಯಗಳನ್ನು ತಿಳಿದುಕೊಳ್ಳಲು ದಿವ್ಯಪ್ರಬಂಧ ಉತ್ತಮ ಸಾಧನವಾಗಿದೆ. ಅನೇಕ ವಿಷಯಗಳಲ್ಲಿ ಉಭಯ ವೇದಗಳಲ್ಲಿ ಸಾಮ್ಯವಿದೆ ಈ ಗಾಥೆಗಳನ್ನು ದ್ರಾವಿಡವೇದ/ವೇದಾಂತ ಎಂದು ಕರೆಯುವರು. ಇಂದಿಗೂ ಉತ್ಸವಗಳಲ್ಲಿ ದೇವರು ಪ್ರಬಂಧ ಗೋಷ್ಠಿಯನ್ನು ಅನುಸರಿಸಿದರೆ, ವೇದ ಗೋಷ್ಠಿ ಉತ್ಸವರನ್ನು ಅನುಸರಿಸುವುದು. ಈ ದ್ರಾವಿಡ ವೇದವು ಸತ್ವಗುಣ ವರ್ಧಕವಾಗಿ ಸಾತ್ವಿಕರಿಗೆ ಭಗವತ್ಸರೂಪಗುಣ ವಿಭೂತ್ಯಾದಿಗಳನ್ನು ಬೋಧಿಸುತ್ತಾ ಅವರ ಇಷ್ಟಾರ್ಥಗಳನ್ನು ಈಡೇರಿಸುವಲ್ಲಿ ಹಾಗೂ ಮೋಕ್ಷಸಾಧನೆಗೆ ನೆರವಾಗುವುದು. ಪ್ರಾಚೀನವಾದ ವೇದಗೋಷ್ಠಿಗಳಲ್ಲಿ ಪ್ರಬಂಧ ಗೋಷ್ಠಿ ಅಗ್ರಮರ್ಯಾದೆಗೆ ಯೋಗ್ಯವಾದುದು. ಆದ್ದರಿಂದ ದ್ರಾವಿಡವೇದವೇ ಶ್ರೇಷ್ಠವಾದುದು ಎಂದು ದೇಶಿಕರು ಹೇಳುವರು. ಪ್ರಾಚೀನ ನಾನಾಶ್ರುತಿ ಪರಿಷದಾಂ ಪಾದುಕೇ ಪೂರ್ವಗಣ್ಯಾ (ಪಾದುಕಾಸಹಸ್ರ - 29) ಅದೂ ಅಲ್ಲದೆ ತಿರುಪತಿ ಶ್ರೀರಂಗ ಮುಂತಾದ 108 ಕ್ಷೇತ್ರಗಳ ಗುರುತು ಮತ್ತು ಪವಿತ್ರತೆ ದಿವ್ಯಪ್ರಬಂಧದ ಪ್ರಭಾವದಿಂದ ಉಂಟಾದುದು ಎಂದು ಹೇಳಿದರೆ ತಪ್ಪಾಗಲಾರದು. 'ತಿರುಮಾಲೆ ಕೃತಿಯನ್ನು ರಚಿಸಿದ ವಿಪ್ರನಾರಾಯಣರು ತಮಿಳು ವೇದದ ಮಾಲೆಯನ್ನೇ ಕಟ್ಟಿದರು ಎಂದು ಅಮುದನಾರ್ ರಾಮಾನುಜ ನೂತ್ತಂದಾದಿಯಲ್ಲಿ ಅಭಿಪ್ರಾಯ ಪಡುವರು.

ಸಂಖ್ಯೆಯ ಮೋಜು: ಆಳ್ವಾರರಗಾಥೆಗಳನ್ನು 'ನಾಲಾಯಿರಂ' (4000 ಪದ್ಯಗಳು) ಎಂದು ಕರೆಯುವರು.

ಕಾವ್ಯಲಕ್ಷಣ / ಶೈಲಿ : ದಿವ್ಯಪ್ರಬಂಧವು ಪ್ರಾಚೀನ ತಮಿಳಿನ 'ಸಂಗಂ' ಸಾಹಿತ್ಯಕ್ಕೆ ಸೇರಿದೆ. 'ಶೆಂಗತ್ತಮಿಳ್‌ಮಾಲ್ಯೆ' ಎಂದೇ ಆಂಡಾಳ್ ಹಾಡಿರುತ್ತಾಳೆ. ಪ್ರಬಂಧದಲ್ಲಿ ೨ ರಿಂದ ೧೦ ಸಾಲುಗಳವರೆಗೂ ಪದ್ಯಗಳಿವೆ. ಅಪರೂಪದ ಪದಗಳಿವೆ ಕೆಲವೆಡೆ ಉಚ್ಚರಿಸಲು ಕ್ಲಿಷ್ಟವಾದ ಪದಗಳಿವೆ. ಇರಾಮಾನುಜ, ಇರಾಘವನ್, ಶಾಳಕ್ಕಿರಾಮಂ (ಸಾಲಗ್ರಾಮ) ವದರಿಯಾಚ್ಚಿರ ಮತ್ತು (ಬದರಿಕಾಶ್ರಮ) ಪಿರಮನ್ (ಬ್ರಹ್ಮ) ಇರಣಿಯನ್ (ಹಿರಣ್ಯ) ಇರುಡಿಕೇಶನ್ (ಹೃಷಿಕೇಶ) ತೋತ್ತಿರಂ (ಸ್ತೋತ್ರ) ಕಂಜನ್ (ಕಂಸ) ಇತ್ಯಾದಿ.

ಹಿಂದಿನ ಪದ್ಯದ ಕೊನೆಯಪದವೇ (ಅಂತ್ಯ) ಮುಂದಿನ ಪದದ ಮೊದಲನೆಯ ಪದವಾಗಿರುವ (ಆದಿ) ಅಂದಾದಿ ಶೈಲಿ ದಿವ್ಯಪ್ರಬಂಧದ ಅಪರೂಪದ ಲಕ್ಷಣ ಆಗಿದೆ. ದಿವ್ಯಪ್ರಬಂಧದ ಉಗಮ ಪ್ರಥಮವಾಗಿ ಈ ಶೈಲಿಯಲ್ಲಿ ಕಾಣಿಸಿಕೊಂಡಿದೆ. ಮೊದಲಾಳ್ವಾ ರರು ಭಕ್ತಿಸಾರರು ಹಾಗೂ ನಮ್ಮಾಳ್ವಾರರು ಈ ಶೈಲಿಯಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಪೆರಿಯಾಳ್ವಾರರ ಕೃತಿಗಳಲ್ಲಿ ಕೆಲವು ವಿಶೇಷಗಳನ್ನು ನೋಡಬಹುದು. ಎ) ಲಾಲಿಹಾಡುಗಳು - ಪ್ರತಿಪದ್ಯವು 'ತಾಲೇಲೋ' ಎಂದು ಕೊನೆಗೊಳ್ಳುವುದು. ಇವು ತಾಲಾಟ್ಟುಪಾಟ್‌ಹಳ್ ಎಂದು ಪ್ರಸಿದ್ಧಿಯಾಗಿವೆ (ಪೆ ಆತಿ - ೧ - ೪ - ೧ ರಿಂದ ೧೦). ಬಿ) ಪೂಚ್ಚೂಡಲ್ ಪಾಶುರಗಳು - ಪೂಚ್ಚೂಡವಾರಾಯ್ (ಪೆ. ಆತಿ - ೨ - ೭ - ೧ ರಿಂದ ೧೦). ಸಿ) ನೀವಾರಾಯ್ ಎಂದು ಕೊನೆಗೊಳ್ಳುವ ೧೦ ಪದ್ಯಗಳು (ಪೆ. ಆತಿ ೨ - ೪ - ೨೦). 'ನೀವಾರಾಮ್' ಎಂದು ಪ್ರಸಿದ್ಧಿಯಾಗಿದೆ. ಭಗವದಾರಾಧನ ಸಮಯದಲ್ಲಿ ಪ್ರತಿದಿನವೂ ಅಭಿಷೇಕಕಾಲದಲ್ಲಿ ಇದನ್ನು ಅನುಸಂಧಾನ ಮಾಡುವ ಸಂಪ್ರದಾಯ ದೇವಸ್ಥಾನಗಳಲ್ಲಿ ಮನೆಗಳಲ್ಲಿಯೂ ಬೆಳೆದುಬಂದಿದೆ. ನಮ್ಮಾಳ್ವಾರರ ಹಾಗೂ ಕಲಿಯನರ ಕೃತಿಗಳಲ್ಲಿ ಪ್ರಾಸಬದ್ಧವಾದ ಪಾಶುರಗಳು ಯಥೇಚ್ಛವಾಗಿವೆ ಉದಾ : ಆಳುಮ್, ತೋಳುಮ್, ತಾಳುಮ್, ನಾಳುಮ್ (ತಿಮೊ ೩ - ೭ - ೨) ಉಡ್ಯೆಯಾರ್, ಪಡ್ಯೆಯಾರ್ ನಡ್ಯೆಯಾರ್ (೩-೭-೪), 'ಎನ್ಗೋ' ಎಂದು ಕೊನೆಗೊಳ್ಳುವ ಪದ್ಯ ೩-೪-೧ ರಿಂದ ೧೦ ಇತ್ಯಾದಿ. ಕಲಿಯನರ ತಿರುವೆಳುಕ್ಕೂಪೆರುಕ್ಕೈ ಎಂಬ ತಿರು ಕೃತಿಯನ್ನು (೪೭ ಸಾಲುಗಳಿವೆ) ರಥದಂತೆ ಜೋಡಿಸುವರು. ಇದು ಕುಂಭಕೋಣದ ಶಾರ್ಙ್ಗಪಾಣಿಯನ್ನು ಕುರಿತದ್ದು ಎಂದು ಹೇಳುವರು. ಆಳ್ವಾರರನ್ನು 'ನಾರ್ಕವಿ ಪೆರುಮಾಳ್' ಎಂದು ಕರೆಯುವರು ಕಲಿದೋಷವನ್ನು ಕಳೆಯುವ ಭಾಸ್ಕರರಾದ್ದರಿಂದ 'ಕಲಿಧ್ವಂಸ ಕವಿ ಲೋಕದಿವಾಕರಂ' ಎಂದೂ ಕರೆಯುವರು.

ಭಕ್ತಿಗಿಂತಾ ಭಾವಕ್ಕೆ ಆದ್ಯತೆ ಇದೆ. ಮಾರನ್ ತಾವು ಪರಾಂಕುಶನಾಯಕಿಯಾಗಿ, ಕಲಿಯನ್ ತಾವುಪರಕಾಲ ನಾಯಕಿಯಾಗಿ ವಿರಹಾವಸ್ಥೆಯಲ್ಲಿರುವವಳಂತೆಯೂ, ಮಗಳು ಪಡುವ ವೇದನೆಯನ್ನು ಕಂಡ ತಾಯಿ ಇತರ ಸ್ತ್ರೀಯರಿಗೆ ಹೇಳಿದಂತೆಯೂ ಚಿತ್ರಿಸಿಕೊಂಡು ಭಗದನುಭವವನ್ನು ಸವಿದಿರುತ್ತಾರೆ. ದುಂಬಿ, ಪಕ್ಷಿ ಮೇಘ ಮುಂತಾದ ಮಾಧ್ಯಮಗಳಿಂದ ಭಗವಂತನಿಗೆ ಅರಿಕೆಮಾಡಿಕೊಳ್ಳುವ ಸಾಹಸ ವನ್ನು ಮಾಡಿರುತ್ತಾರೆ. ಪೆರಿಯಾಳ್ವಾರರು ತಾವು ಯಶೋದೆಯಂತೆ ಭಾವಿಸಿಕೊಂಡು ಬಾಲಕೃಷ್ಣ ಲೀಲೆಗಳನ್ನು ಚೆನ್ನಾಗಿ ಸವಿದಿದ್ದಾರೆ. 'ನಾವಲಂ' ದಶಕದಲ್ಲಿ ಶ್ರೀ ಕೃಷ್ಣನ ವೇಣುಗಾನದ ಅದ್ಭುತವನ್ನು ವರ್ಣಿಸಿದ್ದಾರೆ. ಆಂಡಾಳ್ ಕೃತಿಗಳಲ್ಲಿ ಸಹಜವಾದ ಸ್ತ್ರೀ ಭಾವನೆಯಿಂದ ಮಧುರಭಾವದಿಂದ ಭಗವಂತನನ್ನು ಅನುಭವಿಸುವ ಸಾಹಸವನ್ನು ನೋಡಬಹುದು. ಗುರುವಿಗೆ ಮಿಗಿಲಾದ ದೈವವಿಲ್ಲ ಎಂದು ಮಧುರ ಕವಿಗಳು ತಮ್ಮಗುರುವಾದ ನಮ್ಮಾಳ್ವಾರರನ್ನು ಹಾಡಿಕೊಂಡಾಡಿರುವ ಕೃತಿ 'ಕಣ್ಣಿನುಣ್‌ಶಿರುತ್ತಾಂಬು 'ಏಕೋದೇವೋ ಕೇಶವೋ' ಎಂಬಂತೆ ಶ್ರೀರಂಗನಾಥನೇ ಸರ್ವಸ್ವ ಎಂಬ ಭಾವನೆ ಮೂಡುವ ಕೃತಿ ವಿಪ್ರನಾರಾಯಣರದ್ದು. ೩೩ ಪದ್ಯಗಳುಳ್ಳ 'ತಿರುನೆಡುಂದಾಂಡಹಂ' ಇವೆರಡೂ ಕೃತಿಗಳು 'ದಂಡಕ' ರೀತಿಗೆ ಸೇರಿದ ಪ್ರಬಂಧದಗಳಾಗಿವೆ.

ಪ್ರತಿಪ್ರಬಂಧಕ್ಕೆ 'ತನಿಯನ್' ಎಂಬ ಆರಂಭ ಶ್ಲೋಕವಿರುವುದು ಉದಾ : ನಾಥಮುನಿಗಳು ಪೆರಿಯಾಳ್ವಾರರ ತಿರುಮೊಳಿಗೆ 'ಗುರುಮುಖಮನದೀತ್ಯ ಪ್ರಾಹವೇದಾನಶೇಷಾನ್' ಎಂದೂ, ಪರಾಶರಭಟ್ಟರು, ತಿರುಪ್ಪಾವೈಗೆ 'ನೀಳಾತುಂಗ ಸ್ತನಗಿರಿತಟೀ' ಇತ್ಯಾದಿ. 'ಭಗವದ್ವಿಷಯ' ಎಂದು ಪ್ರಸಿದ್ಧಿಯಾಗಿರುವ ತಿರುವಾಯ್ ಮೊಳಿಗೆ 'ಪಡಿ' ವ್ಯಾಖ್ಯಾನ ಗ್ರಂಥಗಳಿವೆ.

ಪ್ರಬಂಧದಲ್ಲಿ ಏನಿದೆ ? - ದಿವ್ಯಪ್ರಬಂಧದಲ್ಲಿ ಸೃಷ್ಟಿ, ಸ್ಥಿತಿ, ಲಯ ಮುಂತಾದ ಭಗವಂತನ ಲೀಲೆಗಳು, ವ್ಯೂಹಾದಿ ವಿಷಯಗಳು ದೇವತೆಗಳ ವಿಚಾರ, ಪುರಾಣೇತಿಹಾಸದ ಉಲ್ಲೇಖಗಳು, ಮತಕ್ಕೆ ಸಂಬಂಧಿಸಿದ ವಿಷಯಗಳೇ ತುಂಬಿವೆ.

ಏಕ ಮೂರ್ತಿಯಿರುಮೂರ್ತಿ
ಮೂನ್ರು ಮೂರ್ತಿ ಪಲಮೂರ್ತಿಯಾಹಿ
ಐನ್ದು ಪೂದಮಾಯ್
ಇರಂಡು ಶುಡರಾಯಿರುವಾಹಿ (ತಿ.ಮೊ. ೪-೩-೩)

ಎಂದು ಮಾರನ್ ಮೂಲ ಸೃಷ್ಟಿಯ ಬಗ್ಗೆ ಹೇಳಿರುತ್ತಾರೆ. ಮುಪ್ಪತ್ತು ಮೂನ್ರು ಅಮರರ್ ಎಂದು ತಿರುಪ್ಪಾವೈಯಲ್ಲಿ ಉಲ್ಲೇಖಿಸಿರುವುದು ಅಷ್ಟವಸು, ದ್ವಾದಶಾದಿತ್ಯರು, ಏಕಾದಶರುದ್ರರು. ಇಂದ್ರ ಮತ್ತು ಪ್ರಜಾಪತಿ (ಕೆಲವು ಗ್ರಂಥಗಳಲ್ಲಿ ಇಬ್ಬರು ಅಶ್ವಿನಿ ದೇವತೆಗಳು ಎಂದು ಹೇಳಲ್ಪಟ್ಟಿದೆ) - ಇವರುಗಳ ಜಾಲಾಂದ್ರದಿಂದಲೇ ಮುಕ್ಕೋಟಿ ದೇವತೆಗಳ ಕಲ್ಪನೆ ಉಂಟಾಗಿದೆಯೆಂದು ಅರ್ಥೈಸಲಾಗಿದೆ. ತ್ರಿಮೂರ್ತಿಗಳಲ್ಲಿ ಮಧ್ಯೆ ಇರುವವನೇ ವಿಷ್ಣು ಎಂಬ ವಾಲ್ಮೀಕಿ ವಾಕ್ಯದಸಮಕ್ಕೆ (ಎ) ಮೂವರಾಹಿಯ ಒರುವನ್ಯೆ ಎಂದು ಕಲಿಯನ್ ಪೆರಿಯತಿರುಮೊಳಿ ೩-೧-೧೦ ರಲ್ಲಿ, (ಬಿ) ಮೂವರಿಲ್ ಮುನ್ ಮುದಲ್ವನ್ ಎಂದು ೯-೯-೧ ರಲ್ಲಿ, (ಸಿ) ಮೂವರೇ ಅಮ್ಮೂವರಳುಮ್ ಮುದಲ್ ನೀರ್ವಣನ್ - ಎಂದು ಪೊಯ್ಗೈ ಮುನಿ ಮುದಲ್ ತಿರುವಂದಾದಿಯಲ್ಲಿ ಸ್ಪಷ್ಟಪಡಿಸುವರು ಶ್ರುತಿಯಲ್ಲಿ ಬರುವ 'ಆಕಾಶ, ಪರಮವ್ಯೋಮ, ಮೂಲ ಪ್ರಕೃತಿ' ಮುಂತಾದ ಪದಗಳಿಗೆ ವಿಣ್‌ಮುದಲ್, ಏಳುಂಹಮ್, ಪಿರುಕಿಂತಿ ಮುಂತಾಗಿ ಹೇಳಲ್ಪಟ್ಟಿದೆ

ಭಗವಂತನ ಪಂಚವ್ಯೂಹಗಳಲ್ಲಿ ವಿಭವ ಮತ್ತು ಅರ್ಚಾರೂಪಗಳ ಬಗ್ಗೆ ಅತಿ ಹೆಚ್ಚು ವಿವರಣೆ ಇದೆ ಮಾವಾಹಿ, ಮೀನಾಯ್ ಆಮೈಯಾಯ್ ಅರಿಯಾಯ್ ಅನ್ನಮಾಯ್ ಎಂದು ವಿಭವಾವತಾರಗಳ ಬಗ್ಗೆ ಉಲ್ಲೇಖವಿದೆ. ಕೃಷ್ಣಾವತಾರವು (ಕಣ್ಣನ್ ಎಂಬ ದಿವ್ಯನಾಮ ಸೇರಿ) ೧೫೭ ಪಾಶುರಗಳಲ್ಲಿವೆ ರಾಮಾವತಾರ ೮೯, ವಾಮನ-ತ್ರಿವಿಕ್ರಮ ೭೦, ನೃಸಿಂಹ ೫೦, ವರಾಹ ೨೧, ಮತ್ಸ್ಯ ೧೨, ಹಂಸಾವತಾರಂ ೦೭, ಕೂರ್ಮ ೦೬, ಕಲ್ಕಿ ೦೪, ಹಯಗ್ರೀವ ಪರಶುರಾಮಾವತಾರಗಳು ಉಲ್ಲೇಖ ಎರಡೆರಡು ಪಾಶುರಗಳಲ್ಲಿವೆ. ಭಗವನ್ನಾಮ ಸಂಕೀರ್ತನೆಯನ್ನು ಪ್ರಕಾಶಪಡಿಸುವ 'ಪನ್ನಿರನಾಮಪಾಟ್ಟುಕಳ್' (ದ್ವಾದಶನಾಮ) ಪೆರಿಯ ತಿರುಮೊಳಿ ೨ - ೩ - ೧ - ರಿಂದ ೧೦ ರಲ್ಲಿವೆ ದ್ವಾದಶನಾಮಗಳಲ್ಲಿ ಮೂಲ ಮಂತ್ರವಿಷಯವಾದ ನಾರಾಯಣ ಶಬ್ದವು ೧೦೫ ಬಾರಿ, ಗೋವಿಂದ ೪೧ ಮಾಧವ ೩೧, ಕೇಶವ ೨೬, ದಾಮೋದರ ೧೭, ಮಧುಸೂಧನ ೧೬, ಶ್ರೀಧರ ೧೬, ಪದ್ಮನಾಭ ೧೦, ಹೃಷಿಕೇಶ ೦೬, ಬಾರಿ ಹೇಳಲ್ಪಟ್ಟಿವೆ.

ಗೋವರ್ಧನೋದ್ಧರಣ, ಗಜೇಂದ್ರಮೋಕ್ಷ, ಬಾಲಕೃಷ್ಣ, ಲೀಲೆಗಳು ಯಥೇಚ್ಛವಾಗಿ ಹೇಳಲ್ಪಟ್ಟಿದೆ. ಕಲಿಯನ್ ತಮ್ಮ ಪೂರ್ವಚರಿತೆಯ ಅದ್ಭುತ ಪ್ರಸಂಗವನ್ನು ಮರೆಯದೆ ಅದರ ಕುರುಹಾಗಿ ತಮ್ಮ ಕೃತಿಗಳಲ್ಲಿ 'ನಾರಾಯಣ' ನಾಮವನ್ನೇ ಹೆಚ್ಚು ಬಳಸಿರುತ್ತಾರೆ.

ಅರ್ಚೆಯಲ್ಲಿ 'ತಲ್ಯೆ ಅರಂಗಂ' ಎಂಬಂತೆ ೨೪೫ ಪಾಶುರಗಳಲ್ಲಿ ಶ್ರೀರಂಗ, ೨೨೦ ಪಾಶುರಗಳಲ್ಲಿ ತಿರುಪತಿ (ವೇಂಗಡಂ) ಕ್ಷೇತ್ರಗಳ ಉಲ್ಲೇಖವಿದೆ. ತಿರುನರ್ಯೆಯೂರ್ ಮತ್ತು ತಿರುಕಣ್ಣಪುರಕ್ಷೇತ್ರಗಳನ್ನು ಕುರಿತು ತಲಾ ೧೦೦ ಪಾಶುರಗಳಿವೆ. ಪೆರಿಯತಿರುಮೊಳಿ ೧ - ೭ - ೧ ರಿಂದ ೧೦ 'ಅಂಗಣ್' ದಶಕವು ಅಹೋಬಿಲಕ್ಷೇತ್ರವನ್ನು ಕುರಿತದ್ದು (ಶಿಂಗವೇಳ್‌ಕುನ್ರಮೇ). ತಿರುವಾಯ್‌ಮೊಳಿಯ 'ಉಯರ್‌ವರ' ದ ಶಕದ ಪ್ರಥಮ ಪದ್ಯದಲ್ಲಿ 'ಅಮರರ್‌ಹಳ್ ಅಧಿಪತಿ' ಎಂದು ಹೇಳಿರುವುದು ದೇವರಾಜನೆಂದೂ, ಇದೇ ಕಂಚಿವರದ ರಾಜನೆಂದೂ ಹೇಳುವರು ಪ್ರತಿನಿತ್ಯವು ಸುಪ್ರಭಾತದಲ್ಲಿ ಪ್ರಬಂಧ ಗೋಷ್ಠಿಯಿಂದ ಈ ದಶಕ ಹೇಳುವುದು ವಾಡಿಕೆಯಾಗಿ ಬಂದಿದೆ ಹೀಗೆಯೇ 'ಒರುನಾಯಕ' ದಶಕದಲ್ಲಿ ಬರುವ 'ತಿರುನಾರಣನ್ ಮುಡಿತ್ತಿರುಮಾಲ್ ಪದಗಳು ಮೇಲುಕೋಟೆಯ ಮೂಲವರನ್ನೂ ಮತ್ತು ವೈರಮುಡಿಯನ್ನೂ ಸೂಚಿಸುವುವು ಎಂದೂ ಮತ್ತು ಈ ದಶಕ ಯತಿರಾಜರಿಗೆ ತುಂಬಾ ಅಭಿಮತವಾದುದು ಎಂದೂ ಹೇಳುವರು ಅರ್ಚೆಯಲ್ಲಿ ವಿಭವಾವತಾರಗಳನ್ನು ಸಮೀಕರಿಸುವ ನೂರಾರು ಪಾಶುರಗಳಿವೆ ನಾಂಗೂರು, ತಿರುಪುಲ್ಲಾಣಿ, ತಿಲ್ಲೈ, ತಿರುಚಿತ್ರಕೂಟ (ಚಿದಂಬರ) ಮುಂತಾದ ಕ್ಷೇತ್ರಗಳನ್ನು ಕುರಿತ ಪಾಶುರಗಳು ನಿದರ್ಶನಗಳಾಗಿವೆ. ಬದರಿ, ತಿರುಪತಿ, ಅಹೋಬಿಲ, ಅಳಹರ್ ಮಲ್ಯೆ ಮುಂತಾದ ಕ್ಷೇತ್ರಗಳನ್ನು ಕುರಿತ ಪದ್ಯಗಳಲ್ಲಿ ಆಳ್ವಾರರು ಬಿಡದೆ ಪರಿಸರವನ್ನು ಸುಂದರವಾಗಿ ಚಿತ್ರಿಸಿಕೊಂಡು ವರ್ಣಿಸಿರುತ್ತಾರೆ.

ಭೂತಾಳ್ವಾರರು 'ಮಾಮಲ್ಲೈ' (ಮಹಾಬಲಿಪುರಂ) ಎಂದು ಹೇಳಿರುವುದು ಪಲ್ಲವರಾಜ ಮಾಮಲ್ಲವರ್ಮನನ್ನೂ, ಕಲಿಯನ್ 'ಪರಮೇಚ್ಚುರ ವಿಣ್ಣಹರಂ' (ಕಂಚಿ) ಎಂದು ಹೇಳಿರುವುದು ಪರಮೇಶ್ವರ ವರ್ಮನನ್ನೂ, ಪೆರಿಯಾಳ್ವಾರರು 'ನೆಡುಮಾರನ್' ಎಂದು ಹೇಳಿರುವುದು ಪಾಂಡ್ಯರಾಜ ವಲ್ಲಭದೇವನನ್ನು ಕುರಿತದ್ದು ಎಂದು ಚರಿತ್ರಕಾರರಿಂದ ತಿಳಿದುಬರುವುದು. ಆಳ್ವಾರರ ಕಾಲನಿರ್ಣಯಕ್ಕೆ (೫ ರಿಂದ ೮ ನೆ ಶತಮಾನ ಎಂದು ಒಂದು ಅಂದಾಜು) ಈ ಉಲ್ಲೇಖಗಳು ನೆರವಾಗುವುವು.

ಶ್ರೀ ವೈಷ್ಣವ ಸಿದ್ಧಾಂತಕ್ಕೆ ದಿವ್ಯಪ್ರಬಂಧ ಗಟ್ಟಿಯಾದ ಅಡಿಪಾಯ ಹಾಕಿಟ್ಟಿರುತ್ತೆ. ನಮ್ಮಾಳ್ವಾರರ 'ತಿರುವಾಶಿರಿಯಂ' ನ ೭ ಪದ್ಯಗಳು ತತ್ವಹಿತ ಪುರುಷಾರ್ಥ, ಭಗವಂತನ ದಿವ್ಯಮಂಗಳ ವಿಗ್ರಹ ವರ್ಣನೆ ಮತ್ತು ರಕ್ಷಕತ್ವವನ್ನು ಪ್ರಕಾಶಪಡಿಸುವುವು. ತಿರುವಾಯ್ ಮೊಳಿಯು ವಿಶಿಷ್ಟಾದ್ವೈತ ವೇದಾಂತದ ರೂಪು ರೇಷೆಗಳ ಸಾರವೇ ಆಗಿರುತ್ತೆ ಹಾಗೂ ಶ್ರೀ ವೈಷ್ಣವಧರ್ಮದ ಸಾಹಿತ್ಯದ ಅಮೂಲ್ಯ ಗ್ರಂಥವೇ ಆಗಿದೆ. ತಿರುಪ್ಪಾವೈಯಲ್ಲಿರದ ವಿಷಯವೇ ಇಲ್ಲ 'ಐ ಐಂದು ಮೈಂದು' ಎಂದು ಐದು ಪದ್ಯಗಳ ಗುಂಪು ತುಂಬಾ ತಾತ್ವಿಕವಾದುದು. ಭಗವದನುಭವಕ್ಕೆ ಬೇಕಾದ ಉಪಕರಣಗಳು, ಅರ್ಥಪಂಚಕಗಳು, ಶರಣಾಗತಿ, ಭಗವಂತನನ್ನು ಪಡೆಯುವ ಮಾರ್ಗ ಭಗವನ್ಮಹಿಮೆ ಮುಂತಾದ ವಿಚಾರಗಳೇ ಈ ಗೋದೋಪನಿಷತ್‌ನಲ್ಲಿದೆ ಭಗವಂತನು ಚೇತನಾಚೇತನಗಳನ್ನು ಶರೀರವನ್ನಾಗಿ ಹೊಂದಿ ಸುಂದರವಾದ ವೇದಗಳ ಅರ್ಥವೂ ತಾನೇ ಆಗಿ ತ್ರಿಮೂರ್ತಿ ರೂಪವನ್ನು ತಾನೇ ಹೊಂದಿದವನಾಗಿ, ಆದಿದೇವನೂ ತಾನೇ ಆಗಿದ್ದಾನೆ ಎಂದು ಕಲಿಯನ್ ವಿವರಿಸುವರು (ಪೆತಿ ೪-೧-೨).

ಯಾವರುಂ ಆಯ್ ಯಾವೈಯುಂ  
ಆಯ್ ಎಳಿಲ್ ವೇದಂ  
ಪೊಳ್ ಹಳುಂ ಆಯ್ ಮೂವರುಂ  
ಆಯ್ ಮುದಲ್ ಮೂರ್ತಿಯಾಯ್

ಹೀಗೆ ಆಳ್ವಾರರು ತಮ್ಮ ಕಾಲದಲ್ಲಿ ರೂಢಿಯಲ್ಲಿ ಶ್ರೀವೈಷ್ಣವ ಧರ್ಮದ ಸ್ವರೂಪವನ್ನು ತತ್ವದೃಷ್ಟಿಯಾಗಿ ತಮ್ಮ ಪ್ರಬಂಧದಲ್ಲಿ ನಿರೂಪಿಸಿರುತ್ತಾರೆ. ಮುಂದೆ ಬರುವ ದರ್ಶನ ಸ್ಥಾಪನಾಚಾರ್ಯರುಗಳಿಗೆ ಶ್ರೀವೈಷ್ಣವ ಸಿದ್ಧಾಂತವನ್ನು ವ್ಯಾಪಿಸಲು ಆಳ್ವಾರರ ತತ್ವದೃಷ್ಟಿ ಸ್ಫೂರ್ತಿಕೊಟ್ಟಿತು. ದ್ರಾವಿಡ ವೇದ ಸ್ವರೂಪವಾದ ಸಾವಿರ ಪಾಶುರಗಳ ತಿರುವಾಯ್‌ಮೊಳಿ ಎಂಬ ಶಿಶುವನ್ನು ಹೆತ್ತ ಮೊದಲ್‌ತಾಯಿ ನಮ್ಮಾಳ್ವಾರರು ಈ ಇಬ್ಬರಿಗೂ ಶುಶ್ರೂಷೆ ಮಾಡುವದಾಗಿಯೇ ರಾಮಾನುಜರು ಎಂದು ತನಿಯನ್‌ನಲ್ಲಿ ಸುಂದರ ವ್ಯಾಖ್ಯಾನವಿದೆ.

ಈನ್ರಮುದಲ್‌ತಾಯ್ ಶಡ
ಹೋಪನ್ ಮೊಯಂಬಾಲ್
ವಳರ್ತ ಇದತ್ತಾಯ್
ಇರಾಮಾನುಶನ್

ಜೈನ, ಬೌದ್ಧ, ಚಾರ್ವಾಕ, ವೈಶೇಷಿಕ, ಶೈವ ಮತಗಳ ಉಲ್ಲೇಖ ಅಲ್ಲಲ್ಲಿ ಕಾಣಬರುವುದು ಶಮಣರ್, ಪುತ್ತರ್, ಶಾಕ್ಕಿಯರ್, ನೊಂಬಿಯರ್, ಅಮಣರ್, ವಾದು ಶೈವೀರಹಳುಮ್ ಇತ್ಯಾದಿ. ಮಾರನ್ ೪ - ೧೦ - ೫ ರಲ್ಲಿ ಇಲಿಂಗತ್ತಿಟ್ಟಪುರಾಣಮ್ ಎಂದು ಲಿಂಗಪುರಾಣವನ್ನು ಉಲ್ಲೇಖಿಸಿರುತ್ತಾರೆ. ತೊಂಡರಡಿಪ್ಪೊಡಿ ಆಳ್ವಾರರು ಮುದ್ಗಲ ಕ್ಷತ್ರಬಂಧುಗಳ ದೃಷ್ಟಾಂತವನ್ನು ಸೂಚಿಸಿದ್ದಾರೆ ಇದು ವಿಷ್ಣುಧರ್ಮೋತ್ತರ ಪುರಾಣದಲ್ಲಿ ಬರುವುದು ಕಲಿಯನ್ ಮತ್ತು ಮಾರನ್ ಇಬ್ಬರೂ ಅವೈದಿಕ ಮತಗಳನ್ನು ನಿರಾಕರಿಸಿರುತ್ತಾರೆ

ಭಗವಂತನು ವೇದಪ್ರತಿಪಾದ್ಯನು ಎಂದು ಕಲಿಯನ್ ಸ್ಪಷ್ಟಪಡಿಸುವರು ಎ) ಶಂದೋಹನ್, ಪೌಳಿಯನ್ ಐಂಜಳಿಲ್ ಓಂಬು ತ್ಯೆತ್ತಿರೀಯನ್ ಶಾಮವೇದಿ, ಬಿ) ನಾನ್ಮರೈನೂಲ್ ಹಳುಂ ಕಾರಾದೇ "ನಮ್ಮ ಆಚಾರ್ಯ ಶಠಕೋಪರು 'ತಿರುವಾಯ್ ಮೊಳಿ'ಯಲ್ಲಿ ರಹಸ್ಯ ವೇದಾರ್ಥಗಳನ್ನು ಹೇಳಿರುತ್ತಾರೆ" ಎಂದು ಅವರ ಅನುಪಮಶಿಷ್ಯರಾದ ಮಧುರಕವಿ ಹೇಳುವರು 'ಅರುಳಿನಾನ್ ಅವರು ಮರ್ರೈಯಿನ್ ಪೊರುಳ್' (ಕಣ್ಣಿನುಣ್‌ಶಿರುತ್ತಾಂಬು - ೮) ಚತುರ್ವೇದಗಳ ಸಾರಾಂಶ ದಿವ್ಯಪ್ರಬಂಧದಲ್ಲಿದೆ ಎಂದೂ, ತಿರುವಾಯ್ ಮೊಳಿಯು ಸಾಮವೇದದ ಸಾರವಾದ ಛಾಂದೋಗ್ಯೋಪನಿಷತ್ತನ್ನೆ ಪ್ರತಿಪಾದಿಸುವುದೆಂದು ಪೂರ್ವಾಚಾರ್ಯರು ಅಭಿಪ್ರಾಯಪಡುವರು ನಮ್ಮಾಳ್ವಾರರ ೪ ಪ್ರಬಂಧಗಳು ೪ ವೇದಗಳಿಗೆ ಸಮ ಎಂಬ ನಂಬಿಕೆಯು ಇದೆ 'ಸ್ವಂ ಶ್ರುತಿ ಶತಶಿರಸಿದ್ಧ ಮಧ್ಯಾಪಯಂತಿ' ಎಂದು ಪರಾಶರ ಭಟ್ಟರು ತಿರುಪ್ಪಾವೈ ತನಿಯನ್‌ನಲ್ಲಿ ದ್ರಾವಿಡವೇದದ ಮಹಿಮೆಯನ್ನು ಹೇಳುವರು ದೇಶಿಕರು ನಮ್ಮಾಳ್ವಾರರ ಕೃತಿಗಳನ್ನು 'ಸಂಹಿತೆ' ಎಂದು ಕರೆಯುವರು (ದ್ರಮಿಡೋಪನಿಷತ್ ತಾತ್ಪರ್ಯರತ್ನಾವಳಿ)

ಪಾಶುರಗಳಲ್ಲಿರುವ ಪ್ರಸಿದ್ಧವಾದ ಪದಪುಂಜಗಳು ಯಾವರೀತಿ ಪ್ರಬಂಧವನ್ನು ಮೇರುಕೃತಿಯನ್ನಾಗಿ ಮಾಡಿವೆ ಎಂಬುದನ್ನು ಈ ಕೆಳಕಂಡ ಉದಾಹರಣೆಗಳಿಂದ ಗ್ರಹಿಸಬಹುದು

ಎ) 'ಎನ್ನಮುದನೈಕಂಡಕಣ್ಗಳ್ ಮತ್ತೊನ್ರಿನೈ ಕಾಣಾವೆ' - ಎಂಬ ಪಾಣರ ಪಾಶುರವು ಏಕದೇವೋಪಾಸನೆಯನ್ನು ಸೂಚಿಸಿ ಉತ್ತಮ ತತ್ವವನ್ನೇ ಪ್ರತಿಪಾದಿಸುವುದು

ಬಿ) ಗುರುವಿಗೆ ಮಿಗಿಲಾದ ದೈವವಿಲ್ಲ ಎಂದು ಪ್ರತಿಪಾದಿಸುವ 'ತೇವು ಮಟ್ರರಿಯೇನ್' ಎಂಬ ಮಧುರಕವಿ ವಾಣಿಯು ಆಚಾರ್ಯ ನಿಷ್ಠೆಯನ್ನೇ ಸೂಚಿಸುವುದು.

ಸಿ) ಸದಾ ಭಾಗವತ - ಭಗವಂತನ ಸೇವೆ ಮಾಡುವ ಅವಕಾಶ ನನ್ನ ದಾಗಲಿ ಎಂದು ಹೇಳುವ 'ಪಡಿಯಾಯ್ ಕಿಡಂದು ಉನ್ ಪವಳವಾಯ್‌ಕಾಣ್ಬೇನೆ' ಎಂಬ ಕುಲಶೇಖರಾಳ್ವಾರರ ಹಾಡು ಇಂದು ವಿಷ್ಣುಕ್ಷೇತ್ರಗಳಲ್ಲಿ 'ಕುಲಶೇಖರ ಪಡಿ' ಎಂದು ಕರೆಯಲ್ಪಟ್ಟಿದೆ

ಡಿ) ಕಲಿಯನರ 'ವಾಳ್‌ನ್ದೇಪೋಂ ನೀರೆ' ಎಂಬುದು ಇಂದಳೂರಿನ ಪರಿಮಳ ರಂಗನಾಥ ಸ್ವಾಮಿಯನ್ನು ಕುರಿತ ನಿಂದಾಸ್ತುತಿ. ಆಂಡಾಳ್‌ನ ನಾಚ್ಚಿಯಾರ್ ತಿರುಮೊಳಿ, ಕುಲಶೇಖರರ ಪೆರುಮಾಳ್ ತಿರುಮೊಳಿ ೬ - ೧ ರಿಂದ ೧೦ ಪದ್ಯಗಳಲ್ಲಿ ಶ್ರೀಕೃಷ್ಣನನ್ನು ಕುರಿತ ನಿಂದಾಸ್ತುತಿಗಳಿವೆ ನಮ್ಮಾಳ್ವಾರರು ೪-೬ ನೇ ದಶಕದಲ್ಲಿ ವಾಮಾಚಾರಗಳನ್ನು ಉಲ್ಲೇಖಿಸಿ, ಖಂಡಿಸಿ, ನಿವಾರಣೆಗಾಗಿ ಸೂಕ್ತಸಲಹೆಗಳನ್ನು ಕೊಟ್ಟಿರುತ್ತಾರೆ ಕಲಿಯನ್ ಮತ್ತು ಭಕ್ತಿಸಾರರು ದೇವತಾಂತರ ಭಜನವನ್ನು ಅನೇಕ ಪಾಶುರಗಳಲ್ಲಿ ನಿರಾಕರಿಸಿರುತ್ತಾರೆ.

ಆಚರಣೆ ದಕ್ಷಿಣ (ತೆಂಗಲೈ) ಸಂಪ್ರದಾಯ ಬಹುತೇಕ ದಿವ್ಯಪ್ರಬಂಧವನ್ನೇ ಅನುಸರಿಸುವುದು 'ನಾಲಾಯಿರಂ'ನ ಸಂಕ್ಷಿಪ್ತರೂಪವಾದ ನಿತ್ಯಾನುಸಂಧಾನ (ತಿರುಪಲ್ಲಾಂಡು ತಿರುಪಳ್ಳಿ ಎಳುಚ್ಚಿ, ತಿರುಪ್ಪಾವೈ) ಕೋಯಿಲ್ ತಿರುವಾಯ್ ಮೊಳಿ (ತಿರುಪಲ್ಲಾಂಡು ತಿರುಪಳ್ಳಿ ಎಳುಚ್ಚಿ ತಿರುಪ್ಪಾವೈ, ಕಣ್ಣಿನುಣ್ ತಿರುತ್ತಾಂಬು, ತಿರುವಾಯ್ ಮೊಳಿಯಲ್ಲಿ ಆಯ್ದ ಭಾಗಗಳು) ರಾಮನುಜ ನೂಟ್ರಂದಾದಿ, ತೆಂಗಲೈ - ವಡಕಲೈ ಸಂಪ್ರದಾಯಗಳಿಗೆ ತಕ್ಕಂತೆ ಆಯ್ದ ಪದ್ಯಗಳು ಶಾತ್ತುಮೊರೈ ಸಂದರ್ಭದಲ್ಲಿ ಹೇಳುವುದು ರೂಢಮೂಲವಾಗಿ ಬಂದಿರುತ್ತೆ 'ಶಿತ್ತಂ ಶಿರುಕಾಲೈ' ಹಾಗೂ 'ಪಲ್ಲಾಂಡು' ಹೇಳದೆ ಮನೆ ಮಠಗಳಲ್ಲಿ ದೇವಸ್ಥಾನಗಳಲ್ಲಾಗಲಿ ಭಗವದಾರಾಧನೆಯು ಅಪೂರ್ಣ ಹಬ್ಬಹರಿದಿನಗಳಲ್ಲಿ ಉತ್ಸವಜಾತ್ರೆಗಳಲ್ಲಿ ನಿರ್ದಿಷ್ಟವಾದ ಪಾಶುರಗಳನ್ನು ಹಾಡುವ ಪದ್ಧತಿ ಇದೆ ಉದಾ : ರಾಮನವಮಿಯಂದು ಕುಲಶೇಖರಾಳ್ವಾರರ ಶ್ರೀರಾಮಾವತಾರದ ಪಾಶುರಗಳು (ಪೆರುಮಾಳ್ ತಿಮೊ ೧೦ - ೧) ನೃಸಿಂಹ ಜಯಂತಿಯಂದು 'ಕಲಿಯನರ 'ಸಿಂಗವೇಳ್‌ಕುನ್ರಂ' ಪಾಶುರಗಳು, ಕೃಷ್ಣ ಜಯಂತಿಯಂದು ಪೆರಿಯಾಳ್ವಾರರ ಪಾಶುರಗಳು, ಯಾವುದೇ ಗರುಡೋತ್ಸವದಲ್ಲಿ 'ಭಕ್ತಿಸಾರರ' ನಾನ್ಮುಹನ್ ತಿರುವಂದಾದಿ, ಶ್ರವಣದಂದು 'ಅಹಲಹಿಲ್ಲೆ' ಎಂಬ ತಿರುಪತಿ ಶ್ರೀನಿವಾಸನನ್ನ ಕುರಿತ ಪಾಶುರ, ಮಠಗಳಲ್ಲಿ ಪ್ರತಿ ಅಷ್ಟಮಿಯಂದು ಪಾಣರ 'ಅಲಮಾಮರತ್ತಿನಿಲೈಮೇಲ್' ಪಾಶುರಗಳು ಇತ್ಯಾದಿ. ಧನುರ್ಮಾಸದಲ್ಲಿ ದಿವ್ಯಪ್ರಬಂಧಕ್ಕೆ ಉತ್ಸವವೇ ಇದೆ. ಇದೇ ಅಧ್ಯಯನೋತ್ಸವ, ೨೧ ದಿನಗಳ ಕಾರ್ಯಕ್ರಮ. ಇದನ್ನು ಪಹಲ್‌ಪತ್ (ಬೆಳಗ್ಗೆ) ರಾಪತ್ (ಸಾಯಂಕಾಲ) ಎಂದು ಇಬ್ಭಾಗ ಮಾಡಿ ಪಹಲ್‌ಪತ್‌ನಲ್ಲಿ ಮುದಲಾಯಿರಂ (ತಿರುಪಲ್ಲಾಂಡು, ಪೆರಿಯಾಳ್ವಾರ್ ತಿರುಮೊಳಿ, ತಿರುಪ್ಪಾವೈ, ನಾಚ್ಚಿಯಾರ್ ತಿರುಮೊಳಿ, ಪೆರುಮಾಳ್ ತಿರುಮೊಳಿ, ತಿರುಚ್ಚನ್ದ ವಿರುತ್ತಮ್, ತಿರುಮಾಲೈ, ತಿರುಪ್ಪಳ್ಳಿ ಎಳುಚ್ಚಿ, ಅಮಲನಾದಿಪ್ಪಿರಾನ್ ಮತ್ತು ಕಣ್ಣಿನುಣ್ ಶಿರುತ್ತಾಂಬು) ೫ ದಿನಗಳವರೆಗೂ, ಇನ್ನೈದುದಿನಗಳು ಇರಂಡಾಂ ಆಯಿರಂ (ಪೆರಿಯತಿರುಮೊಳಿ) ಹಾಡುವರು ರಾಪತ್ ೧೦ ದಿನಗಳಲ್ಲಿ ಮೂನ್ರಾಂ ಆಯಿರಂ (ತಿರುವಾಯ್ ಮೊಳಿ) ಹಾಡಿ ೨೧ ನೆ ದಿನ ಇಯರ್‌ಪಾ - ವಿಕ್ಕ ಎಲ್ಲಾ ಪ್ರಬಂಧಗಳನ್ನು ಪಾರಾಯಣ ಮಾಡುವರು ಈ ದಿನಗಳಲ್ಲಿ ದಿವ್ಯಕ್ಷೇತ್ರಗಳು ಹೆಚ್ಚುಕಾಲ ತೆರೆದಿರುತ್ತದೆ ಎಲ್ಲಾ ವಿಷ್ಣುಕ್ಷೇತ್ರಗಳಲ್ಲಿ ಮನೆ ಮಠಗಳಲ್ಲಿ ಶ್ರೀರಂಗನಾಥನನ್ನು ಕುರಿತ ತಿರುಪ್ಪಳ್ಳಿ ಎಳುಚ್ಚಿ ಎಂಬ ಸುಪ್ರಭಾತ ಪದ್ಯಗಳನ್ನೇ ಅನುಸಂಧಾನ ಮಾಡುವರು ಮದುವೆ ಸಮಾರಂಭಗಳಲ್ಲಿ ಆಂಡಾಳ್‌ನ ವಾರಣಮಾಯಿರಂ ರೂಢಿಯಲ್ಲಿದೆ ಶ್ರೀವೈಷ್ಣವನೊಬ್ಬನು ಮಡಿದರೆ ೯ ನೆ ದಿನ ದಿಂದ ನಾಲಾಯಿರ ಪ್ರಬಂಧ ಪಾರಾಯಣ ಆರಂಭವಾಗಿ ಶುಭಸ್ವೀಕಾರದಂದು ದೊಡ್ಡಶಾತ್ತು ಮೊರೆಯೊಂದಿಗೆ ಮುಕ್ತಾಯಗೊಳ್ಳುವುದು ಆದ್ದರಿಂದ ದಿವ್ಯಪ್ರಬಂಧ ಇಂದು ಶ್ರೀ ವೈಷ್ಣವ ಮತದ ಶಿಸ್ತು ಸಂಪ್ರದಾಯಗಳಿಗೆ ಒಂದು ಮೇರುಕೊಡುಗೆ ಆಗಿದೆ. ಹೀಗೆ ಆಳ್ವಾರರ ಸೂಕ್ತಿಗಳು ಈ ಕಲಿಯುಗಕ್ಕೆ ಆದರ್ಶವಾಗಿ ಮಹದುಪಕಾರವಾಗಿರುತ್ತೆ

ಆಳ್ವಾರರಡಿದಾವರೆಗಳಲ್ಲಿ ಶರಣು

* * *

# ದ್ವಯ ಮಂತ್ರ

- ವಿದ್ವಾನ್ 'ರಘುಸುತ'.

ಶ್ರೀವೈಷ್ಣವ (ವಿಶಿಷ್ಟಾದ್ವೈತ ತತ್ತ್ವದ) ಸಂಪ್ರದಾಯದಲ್ಲಿ ದ್ವಯಮಂತ್ರವು ಬಹಳ ಪ್ರಮುಖವಾದ ಸ್ಥಾನವನ್ನು ಪಡೆದಿದೆ ವಿಷ್ಣುವಿನ ಹಿರಿಮೆಗೆ ಮೂಲಾಧಾರವಾದ ಈ ಮಂತ್ರವು ಕೋಟ್ಯಾನು ಕೋಟಿ ಚೇತನರಿಗೆ ಪ್ರಾಣಮಾತ್ರವಾಗಿದೆ ಪ್ರತಿಯೊಬ್ಬ ಆಳ್ವಾರಾಚಾರ್ಯರೂ ಈ ಮಂತ್ರದ ಪ್ರಾಧಾನ್ಯತೆಗೆ ಹೆಚ್ಚು ಒತ್ತುಕೊಟ್ಟು ತಮ್ಮ ಸಿದ್ಧಾಂತದ ಪ್ರತಿಪಾದನೆ ಮಾಡಿದ್ದಾರೆ ಹೀಗಾಗಿ ಇದರ ಪ್ರಭಾವ ಬಹಳ ಮಹತ್ತರವಾದುದು.

ಪಿಳ್ಳೈ ಲೋಕಾಚಾರ್ಯರೂ ಕೂಡ ಈ 'ದ್ವಯಮಂತ್ರದ' ಬಗ್ಗೆ ಹೆಚ್ಚು ವಿವರಗಳನ್ನು ನೀಡುತ್ತಾರೆ. ತಮ್ಮ ಅಷ್ಟಾದಶ ರಹಸ್ಯಗಳಲ್ಲಿ ಈ ಮಂತ್ರದ ವಿವರಣೆಯನ್ನು ವಿಪುಲವಾಗಿ ನೀಡಿದ್ದಾರೆ.

ಅವರ 'ಮುಮುಕ್ಷುಪ್ಪಡಿ'ಯ ಒಂದು ಪ್ರಕರಣ, ಸಂಸ್ಕೃತ ವಾಕ್ಯ ಬಾಹುಳ್ಯವಿರುವ 'ಶ್ರಿಯಃ ಪತಿ ಪಡಿ'ಯ ಒಂದು ಪ್ರಕರಣ, ಬಹಳ ಸಂಗ್ರಹ ರೂಪ ಇದರ ರೂಪರೇಷೆ ನೀಡಿರುವ 'ಯಾದೃಚ್ಛಿಕಪ್ಪಡಿ'ಯಲ್ಲಿ, ಅತಿ ವಿಸ್ತಾರವಾಗಿ ವಿವರಿಸಿರುವ 'ಪರಂದ ಪಡಿ'ಯ ಒಂದು ಪ್ರಕರಣದಲ್ಲಿ, 'ತನಿದ್ವಯ'ದಲ್ಲಿ ಕೇವಲ ಒಂದು ಪ್ರಕರಣದಲ್ಲಿ 'ದ್ವಯಮಂತ್ರ'ದ ವಿವರಗಳನ್ನು ನೀಡಿ, ಅದರ ಭಾವವನ್ನು, ಅದರ ಆಂತರ್ಯವನ್ನು ಸ್ಪಷ್ಟಪಡಿಸಿದ್ದಾರೆ ಅದರ ಪ್ರಾಮುಖ್ಯತೆಯನ್ನೂ ಇವುಗಳಲ್ಲಿ ನೀಡಿದ್ದಾಳೆ

'ದ್ವಯ ಮಂತ್ರ' ಎಂದರೆ 'ಶ್ರೀಮತೇ ನಾರಾಯಣಾಯ ನಮಃ' ಎಂಬುದು. ಅಂದರೆ 'ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೆ' ಎಂಬ ಅಂತರಾರ್ಥ

ಪೆರಿಯ ಪಿರಾಟ್ಟಿಯಾದ ಲಕ್ಷ್ಮೀದೇವಿಯು ನಿರಂತರವೂ ಪರಮಾತ್ಮನೊಂದಿಗೇ ಇರುವ, ಆತನಿಂದ ಬೇರೆಯಾಗದ, ಚೇತನನನ್ನು ರಕ್ಷಿಸಬಲ್ಲಂತಹ ಪುರುಷಾಕಾರಭೂತಳಾಗಿದ್ದಾಳೆ. ಈಕೆಯ ಪುರುಷಾರ್ಥ ದ್ವಯದಲ್ಲಿ ಈ ದ್ವಯ ಮಂತ್ರವನ್ನು ವಿವರಿಸಲಾಗಿದೆ

ಅಕಿಂಚನ್ಯರು, ಅನನ್ಯ ಗತಿತ್ವವನ್ನು ಹೊಂದಿದವರು ಈ ದ್ವಯ ಮಂತ್ರಕ್ಕೆ ಅರ್ಹರು ಅಕಿಂಚನ್ಯ ಎಂದರೆ ಉಪಾಯಾಂತರಗಳನ್ನು ಹೊಂದದೇ ಇರುವುದು ಈ ಮಂತ್ರದ ಪೂರ್ವ ಖಂಡದಲ್ಲಿ 'ಶ್ರೀಮತ್' ಎಂದಿದೆ. ಲಕ್ಷ್ಮಿಯನ್ನು ಪುರುಷಾಕಾರವಾಗಿ ಮುಂದಿಟ್ಟುಕೊಂಡು, ನಾರಾಯಣ ಚರಣೌ' ಎನ್ನುವುದನ್ನು ಉಪಾಯವಾಗಿ ಹೇಳಲ್ಪಟ್ಟಿದೆ ಈ ಮಂತ್ರದ ಉತ್ತರ ಖಂಡದಲ್ಲಿ ಲಕ್ಷ್ಮಿನಾರಾಯಣರನ್ನು ಏಕವಾಗಿ ಚತುರ್ಥಿ ವಿಭಕ್ತಿ ನಿತ್ಯ ಕೈಂಕರ್ಯದಲ್ಲಿ ಪ್ರಾಪ್ತಿಯನ್ನು ನೀಡುವಂತೆ ಬೇಡಲಾಗುತ್ತದೆ ಆ ರೀತಿಯ ಭಾವವಿದೆ. ನಮಸ್ಸು ಎನ್ನುವುದು ಕೈಂಕರ್ಯ ವಿರೋಧಿ ನಿವೃತ್ತಿ ಪ್ರತಿಪಾದಕವಾಗಿರುವುದರಿಂದ, ಕೈಂಕರ್ಯವನ್ನು ನೀಡೆಂದು ಪ್ರಾರ್ಥಿಸುವುದರಲ್ಲಿ ಅಂತಭೂ‌ರ್ತವಾಗಿದೆ

'ಶ್ರೀ' ಶಬ್ದವು ಲಕ್ಷ್ಮೀದೇವಿಗೆ ಮೊದಲ ಹೆಸರು ಇದು ಆಕೆಯ ಪುರುಷಾಕಾರ ಇತ್ಯಾದಿಗಳ ದ್ವಯೆ - ಮುಂತಾದುವುಗಳ ಸ್ವಭಾವವನ್ನು ತಿಳಿಯಪಡಿಸುತ್ತದೆ 'ಶ್ರೀ' ಎನ್ನುವುದು ಸೇವಾವಾಚಕ ಎನ್ನುವ ಧಾತುವಿನಲ್ಲಿನ 'ಶ್ರೀಯುತ ಇತಿ ಶ್ರೀಃ' ಎಂಬುದಾಗಿದೆ (ಭಕ್ತರಿಂದ ) ಆಶ್ರಯಿಸಲ್ಪಟ್ಟವಳಾದುದರಿಂದ 'ಶ್ರೀ' ಎಂಬುದಾಗಿಯೂ 'ಶ್ರಯತ ಇತಿ ಶ್ರೀಃ' ಅಂದರೆ ಆಶ್ರಯಿಸಲ್ಪಟ್ಟವಳಾದುದರಿಂದ 'ಶ್ರೀ' ಎಂದೂ, ಕರ್ತರಿ, ಕರ್ಮಣಿ ವ್ಯುತ್ಪತ್ತಿ ದ್ವಯವು ಸಂಸಿದ್ಧವಾಗಿದೆ.

'ಶ್ರೀಯತೇ ಚೇತನ್ಯೈಃ' ಎಂದೂ ಆಗುತ್ತದೆ ಹೀಗೆಂದರೆ ಚೇತನರಿಂದ ಆಶ್ರಿಯಸಲ್ಪಡುವುದು ಎನ್ನುವ ಕರ್ಮಾರ್ಥಕ ವ್ಯುತ್ಪತ್ತಿಯನ್ನು ಇದು ತೋರಿಸುತ್ತದೆ.

ನಿವೃತ್ತರು ಈಕೆಯ ಕಟಾಕ್ಷಾಧೀನವಾಗಿರುವುದರಿಂದ, ಚೇತನರು ಈಕೆಯಲ್ಲಿ ಆಶ್ರಯಿಸಲ್ಪಡುವ ವಾತ್ಸಲ್ಯಾಧಿಕ್ಯವು ಇರುವುದೆಂದು ಹೇಳಲ್ಪಟ್ಟಿದೆ

'ಶ್ರಯತೇ ಭಗವಂತ ಮಿತಿಶ್ರೀಃ' ಎಂದರೆ ತನ್ನದಾದ ಸ್ವರೂಪಸ್ಥಿತಿ ಪ್ರವೃತ್ತಿಗಳು ಈಶ್ವರ ಕಟಾಕ್ಷಾಧೀನವಾಗಿರುವುದರಿಂದ 'ಭಗವಂತನನ್ನು ಆಶ್ರಯಿಸುತ್ತಿರುವವಳು ಎನ್ನುವ ಕರ್ತರ್ಥಕ ವ್ಯುತ್ಪತ್ತಿ ಮುಖಾಂತರ, ಸ್ವತಂತ್ರನಾದ ಪರಮಾತ್ಮನಲ್ಲಿ ಎಡಬಿಡದೆ ಒಂದಾಗಿ, ಆತನಿಂದ ಬೇರೆಯಾಗದಿರುವುದರ ಕಾರಣವಾಗಿ ಪ್ರಿಯತ್ವ ಇತ್ಯಾದಿಗಳನ್ನು ಹೇಳಲಾಗಿದೆ, ವಿವರಿಸಲಾಗಿದೆ.

ಆದುದರಿಂದ ಲಕ್ಷ್ಮೀದೇವಿಗೆ ಶೇಷಿತ್ವ, ಶೇಷತ್ವಗಳೆರಡೂ ನಿತ್ಯವಾಗಿ ವರ್ತಿಸುತ್ತಿರುತ್ತವೆ ಈಕೆಯು ಚೇತನರ ಕಾರ್ಯವನ್ನು ತನ್ನ ಕಾರ್ಯವೆಂದು ಭಾವಿಸುವಳು. ಇದರ ಮುಖಾಂತರ ಭಗವಂತನನ್ನು ತನ್ನ ಕಟಾಕ್ಷೋಪದೇಶಗಳಿಂದ ಸ್ವಾಧೀನ ಪಡಿಸಿಕೊಂಡು, ಆತನಲ್ಲಿ ಬಂದಿರಬಹುದಾದ ಕೋಪವನ್ನು ಉಪಶಮನ ಮಾಡಿಸಿ, ಚೇತನರನ್ನು ರಕ್ಷಿಸುವ ಕಾರ್ಯವು ಅಸದೃಶವಾದುದು ಈ ಅಸದೃಶ ಹಾಗೂ ಪರಪ್ರಯೋಜಕ ಗುಣವೇ ಪುರುಷಾಕಾರವಾಗಿದೆ.

'ಮತ್' ಪ್ರತ್ಯಯದ ಮುಖಾಂತರ ಪುರುಷಾಕಾರ ಭೂತಳಾದ ಲಕ್ಷ್ಮೀದೇವಿ ಹಾಗೂ ಸರ್ವೇಶ್ವರನು - ಈ ಇಬ್ಬರ ಕಲೆಯುವಿಕೆಯು ನಿತ್ಯವೆಂದು ಸ್ಪಷ್ಟವಾಗುತ್ತದೆ ಸ್ವವ್ಯತಿರಿಕ್ತಗಳಾದ ಸಮಸ್ತ ವಸ್ತುಗಳಿಗಿಂತ ವಿಲಕ್ಷಣಗಳಾದ ಜ್ಞಾನಾನಂದಗಳೇ ಸ್ವರೂಪವಾಗಿ ಹೊಂದಿರುವವನು ಎಂದು ಭಗವತ್ ಸ್ವರೂಪವನ್ನು ಜ್ಞಾನಾನಂದಗಳು ಮೊದಲಾದವುಗಳಿಗೆ ಪೂರ್ವವೇ ಶ್ರಿಯಃ ಪತಿತ್ವವನ್ನು ಲಕ್ಷ್ಮೀದೇವಿಯು ಸ್ಪಷ್ಟಪಡಿಸಿದ್ದಳು ಹೀಗೆ ಈಕೆಯು ಆ ಭಗವತ್ ಸ್ವರೂಪಜ್ಞಾನಾನಂದಕ್ಕೆ ಪ್ರಧಾನ ನಿರೂಪಕಳಾಗಿದ್ದಳು. ಇದೇ ಕಾರಣದಿಂದ ಆಕೆಯೊಂದಿಗೆ ಕೂಡಿ ಇರುವುದೇ ಈ ತತ್ತ್ವದ ಪ್ರಧಾನಾರ್ಥವಾಗಿದೆ.

ಶ್ರೀ ಮಹಾಲಕ್ಷ್ಮಿಯೊಂದಿಗೆ ಕೂಡಿರುವುದರಿಂದಲೇ ಶ್ರೀಮನ್ನಾರಾಯಣನು ಎಂದೆನಿಸಿಕೊಂಡಿದ್ದಾನೆ. ಪುರುಷಾಕಾರ ಉಪಾಯವಸ್ತುಗಳ ನಿತ್ಯಯೋಗವನ್ನು ಪ್ರತಿಪಾದಿಸುತ್ತಿರುವ ಈ ಮಂತ್ರದ ಮುಖಾಂತರ ಈ ವಿಷಯವನ್ನು ಆಶ್ರಯಿಸುವವರೆಗೆ ಅದರಲ್ಲಿ ಅಭಿರುಚಿಯನ್ನು ಹೊಂದಿರುವುದಷ್ಟೆ ಅವಶ್ಯಕ

'ದೇವ್ಯಾಕಾರುಣ್ಯ ರೂಪಯಾ' ಎನ್ನುವಂತೆ ಸಂಪೂರ್ಣ ಕೃಪೆಯೇ ಲಕ್ಷ್ಮೀದೇವಿ. ಇದನ್ನೇ ಪೂರ್ತಿ ಒಳಗೊಂಡಿರುವ ಆಕೆ ಸಂಪೂರ್ಣ ಶರೀರವಾಗಿರುವಳು ಇದರಿಂದ ಈಕೆಯು ಸರ್ವೇಶ್ವರನ ಸ್ವಾತಂತ್ರ್ಯವನ್ನು ಕಡಿಮೆ ಮಾಡಿ, ಕೃಪೆಯನ್ನು ವೃದ್ಧಿಮಾಡಿ, ಚೇತನರನ್ನು ರಕ್ಷಿಸುವಳು.

ಮಹಾಪರಾಧವನ್ನು ಮಾಡಿ, ಬ್ರಹ್ಮಾಸ್ತ್ರಕ್ಕೆ ಗುರಿಯಾಗಿದ್ದ ಸಮಯದಲ್ಲಿ ಕಾಕಾಸುರನು ಪಿರಾಟ್ಟಿ (ಲಕ್ಷ್ಮೀದೇವಿ)ಯ ಕೃಪೆಯಿಂದಲೇ ಬದುಕಿದನಲ್ಲವೆ!

## ನಾರಾಯಣ

ಉಪದೇಶ ಬಲದಿಂದ, ಸೌಂದರ್ಯದಿಂದ, ಸ್ವಾಧೀನ ಮಾಡಿಕೊಂಡು, ಕಾರ್ಯವನ್ನು ನಿರ್ವಹಿಸಿ, ಅದನ್ನು ಸಫಲಗೊಳಿಸಬಲ್ಲ ಪುರುಷಾಕಾರ ಬಲದಿಂದ ಚೇತನನು ಆಶ್ರಯೋನ್ಮುಖನಾಗುತ್ತಾನೆ. ಅಂತಹ ಚೇತನನು ಅನಾದಿಯಾಗಿ ಮಾಡಿದ ಅಪರಾಧಗಳನ್ನು ನೋಡಿ, ಸರ್ವೇಶ್ವರನು ಅವನ್ನು ಸಹಿಸಲಾರದೆ ಕೋಪಿಸಿಕೊಳ್ಳುವನು. ಹಾಗೆ ಕೋಪಗೊಂಡ ಸರ್ವೇಶ್ವರನಿಗೆ, ಸಂಪ್ರೀತಿಗೊಳಿಸುವ ಕಲ್ಯಾಣಗುಣಗಳನ್ನು ವಿವರಿಸುವ ಪದವೇ 'ನಾರಾಯಣ' ಎನ್ನುವುದು. ಆ ಕಲ್ಯಾಣಗುಣಗಳು ಪರಮಾತ್ಮನಿಗೆ ಅನ್ವಯವಾಗುವಂತಹವು. ಆ ಗುಣಗಳು ಯಾವುವೆಂದರೆ ವಾತ್ಸಲ್ಯ, ಸ್ವಾಮಿತ್ವ, ಸೌಲಭ್ಯ ಜ್ಞಾನ, ಶಕ್ತಿ - ಇತ್ಯಾದಿಗಳು.

ವಾತ್ಸಲ್ಯ ಎಂದರೆ ದೋಷ ಭೋಗತ್ವ ಹೀಗೆಂದರೆ ಆಗತಾನೆ ಹುಟ್ಟಿದ ಕರುವಿನ ಬಗ್ಗೆ ತಾಯಿ ಹಸುವಿಗೆ ಇರುವ ಪ್ರೇಮಭಾವವನ್ನು ಇದು ವ್ಯಕ್ತಪಡಿಸುತ್ತದೆ. ಹುಟ್ಟಿದ ಕರುವಿನ ಮೈಮೇಲಿರುವ ಮಾಲಿನ್ಯವನ್ನು ತಾಯಿ ಹಸುವು ರುಚಿಕರವಾದುದೆಂದು ಸ್ವೀಕರಿಸಿ, ಅದಕ್ಕೆ ಹಾಲುಣಿಸಿ, ಬೆಳೆಸುತ್ತದೆ. ಶ್ರೀದೇವಿಯ ಸಾನ್ನಿಧ್ಯದ ಪ್ರಭಾವದಿಂದ ಸರ್ವೇಶ್ವರನು ಚೇತನರ ದೋಷಗಳನ್ನು ಭೋಗ್ಯ ಪರವನ್ನಾಗಿ ತಿಳಿದುಕೊಂಡು, ತನ್ನ ಕಲ್ಯಾಣಗುಣಗಳಿಂದ ಅವನಲ್ಲಿನ ವಿರೋಧಗಳನ್ನು ತೊಲಗಿಸುವನು.

ಸ್ವಾಮಿತ್ವ ಎಂದರೆ ಈ ಚೇತನನು ಸ್ವತಂತ್ರನಾಗಿ, ವಿಷಯಪ್ರಾವಿಣ್ಯದ ದೆಶೆಯನ್ನು ಹೊಂದಿದ್ದರೂ, ಅಂತಹವನನ್ನೂ ದೂರಮಾಡದೆ ಅವನ ರಕ್ಷಣೆಯ ಬಗ್ಗೆಯೇ ಭಗವಂತನು ಚಿಂತಿಸುತ್ತಿರುವನು. ಅಂತಹ ಚೇತನರ ಮೇಲೆ ಆಧಿಪತ್ಯವನ್ನು ಸ್ಥಾಪಿಸಿ, ಅವರಲ್ಲಿನ ವಿರೋಧಗಳನ್ನು ನಿವೃತ್ತಗೊಳಿಸಿ, ಅವರಿಗೆ ಪರಮಪದ ಪ್ರಾಪ್ತವಾಗುವಂತ ಮಾಡುವವನು ಅಂತೆಯೇ ಸ್ವರೂಪಪ್ರಕಾಶವನ್ನು ಅವರಲ್ಲಿ ಉಂಟುಮಾಡಿ, ಪರಭಕ್ತಿ - ಪರಜ್ಞಾನಗಳನ್ನು ಅವರಲ್ಲಿ ನಿರ್ಮಿಸಿ ಅವರನ್ನು ಪರಮಭಕ್ತರನ್ನಾಗಿ ಪರಿವರ್ತಿಸುವ ಭಗವಂತನು ಅವರಲ್ಲಿ ಭಗವದನುಭವವನ್ನು ಪ್ರವೇಶಗೊಳಿಸುವ ಕೃಪೆ ಮಾಡುವುದೇ ಚೇತನರಲ್ಲಿನ ಪರಮ **ಶೇಷಿತ್ವ**

ಸೌಶೀಲ್ಯವೆಂದರೆ ಉಭಯ ವಿಭೂತಿಗಳೊಂದಿಗೆ ತನಗಿರುವ ಸ್ವಾಮಿತ್ವ ರೂಪ ಸಂಬಂಧದ ಪರಿಣಾಮವಾಗಿ ಆಶ್ರಯ ವಿಮುಖತೆಯನ್ನು ಹೊಂದದಂತೆ ತನ್ನ ಅತಿಶಯತೆಯನ್ನು ಭಗವಂತನು ಚೇತನರ ಮೇಲೆ ತೋರುವನು. ಚೇತನರಲ್ಲಿರುವ ನಿಕೃಷ್ಟತ್ವವನ್ನು ಆತನು ಗಮನಕ್ಕೆ ತೆಗೆದುಕೊಳ್ಳುವುದಿಲ್ಲ ಸರ್ವೇಶ್ವರನು ಕೃಷ್ಣಾವತಾರದಲ್ಲಿ ಗೊಲ್ಲರೊಂದಿಗೆ ಒಂದಾಗಿ, ಅವರೊಡನೆ ಆಟಪಾಟ ಮಾಡಿದಂತೆ ಮುಗ್ಧರಾದ ಚೇತನರೊಂದಿಗೆ ಭಗವಂತನು ಒಂದಾಗಿರುತ್ತಾನೆ.

ಸೌಲಭ್ಯವೆಂದರೆ .......... ಭಗವಂತನು ಸಾಮಾನ್ಯ ಚಕ್ಷುಗಳಿಗೆ ಕಾಣುವುದಿಲ್ಲ ಅವರಿಗೆ ವಿಷಯವಾಗುವುದಿಲ್ಲ. ಆದರೂ ಸಾಮಾನ್ಯ ಕಂಗಳಿಂದ ತನ್ನನ್ನು ಸೇವಿಸುವಂತೆ ಆತನು ಮಾಡುತ್ತಾನೆ ಅವರಿಗೆ ತನ್ಮೂಲಕ ಆಶ್ರಯ ನೀಡಿ, ತನ್ನನ್ನು ಆಶ್ರಯಿಸಲು ಅನುಕೂಲವಾಗುವಂತೆ ಅರ್ಚಾರೂಪವನ್ನು ಹೊಂದಿ, ಸುಲಭವಾಗಿ ತನ್ನನ್ನು ಸೇವಿಸಲು ಅನುಕೂಲ ಮಾಡಿಕೊಡುತ್ತಾನೆ. ಇದೇ ಸೌಲಭ್ಯ

ಈ ವಾತ್ಸಲ್ಯಾದಿ ಚತುಷ್ಟವನ್ನು 'ಆಶ್ರಯಣ ಸೌಕರ್ಯಾಪಾದಕ' ಎಂದು ಕರೆಯುವರು. ಅಂತರೆ ಆಶ್ರಯಿಸುವುದಕ್ಕೆ ತಕ್ಕಂತಹ ಸೌಕರ್ಯಗಳನ್ನು ಉಂಟುಮಾಡುವುದು ಎಂದರ್ಥ.

ಜ್ಞಾನವೆಂದರೆ ಈ ಚೇತನರುಗಳಿಗೆ ನಿವರ್ತಿಸಬಲ್ಲ ಅನಿಷ್ಟಗಳನ್ನು, ನೀಡಬೇಕಾದ ಅನಿಷ್ಟಗಳನ್ನು, ತನಗಿಂತ ಇತರರನ್ನು, ಸಕಲ ಪದಾರ್ಥಗಳನ್ನು ಏಕ ಕಾಲದಲ್ಲಿ ನೇರವಾಗಿ ತಿಳಿದುಕೊಳ್ಳುವಂತಹ ತಿಳುವಳಿಕೆಯನ್ನು ಹೊಂದುವುದು ಎಂದರ್ಥ.

ಶಕ್ತಿಯೆಂದರೆ ಹೇಯರಾಗಿ ಇರುವುದರ ಕಾರಣ ತ್ಯಾಜ್ಯರಾದ ನಿತ್ಯ ಸಂಸಾರಿಗಳನ್ನು ಉಪಾಧೇಯತೆಯಿಂದ ಕೂಡಿದ ನಿತ್ಯಸೂರಿಗಳೊಂದಿಗೆ ಸಮಾನವಾಗಿ ಸೇರಿಸಿಕೊಳ್ಳುವ ಅಘಟಿತ ಘಟನಾ ಸಾಮರ್ಥ್ಯವನ್ನು ಹೊಂದಿರುವುದು ಎಂದರ್ಥ.

ಜ್ಞಾನ, ಶಕ್ತಿಗಳೆರಡನ್ನೂ ತಿಳಿಯಹೇಳಿ, ಅವೇ ಪ್ರಾಪ್ತಿ ಪೂರ್ಣಗೊಳ್ಳುವುದಕ್ಕೆ ಸಲಕ್ಷಣವಾಗಿರುತ್ತವೆ. ಪ್ರಾಪ್ತಿ ಎಂದರೆ ಶೇಷಿತ್ವರೂಪ ಸಂಬಂಧವಾಗಿದೆ ಪೂರ್ತಿ ಎಂದರೆ ಆವಾಪ್ತ ಸಮಸ್ತ ಕಾಮತ್ವ

ತಮ್ಮ ದೋಷಗಳನ್ನು ನಶಿಸುವ ಹಾಗೆ ಮಾಡಿ, ಸರ್ವೇಶ್ವರನು ಇಷ್ಟಪ್ರಾಪ್ತಿಯನ್ನು ಹುಟ್ಟಿಸುವನು ಎನ್ನುವ ಧೈರ್ಯದಿಂದ ಆಶ್ರಯಿಸುವುದೇ ವಾತ್ಸಲ್ಯ. ತನ್ನವನಾಗುವುದಿಲ್ಲವೆಂಬ ಭಾವನೆಯಿಂದ ಭಗವಂತನಲ್ಲಿ ತನ್ನತನವನ್ನು ವಿನಿಯೋಗಿಸುವುದರಿಂದ, ತನ್ನ ಹಾಗೂ ಇತರರ ಸಮಸ್ತವನ್ನೂ ತನ್ನ ಸ್ವತ್ತೆಂಬ ಅಭಿಮಾನವನ್ನು ಹೊಂದುವುದೇ ಸ್ವಾಮಿತ್ವ. ಇದಕ್ಕಾಗಿ ಎದುರುಗಡೆ ಇರುವವರು ತನ್ನ ಅತಿಶಯವನ್ನು ನೋಡಿ, ವಿಮುಖರಾಗದಂತೆ ಮಾಡಿಕೊಡುವ ಅನುಕೂಲವೇ ಸೌಶೀಲ್ಯ. ಸೌಶೀಲ್ಯವನ್ನು ಕಣ್ಣಾರೆ ನೋಡಿ ಸೇವಿಸಿ, ಅನುಭವಿಸುವುದಕ್ಕೆ ತಕ್ಕ ಸ್ತರವೇ ಸೌಲಭ್ಯ ಆಶ್ರಯಿಸಿರುವವರ ಇಷ್ಟಪ್ರಾಪ್ತಿಗೆ, ಅನಿಷ್ಟ ನಿವಾರಣೆಗೆ ತಕ್ಕದಾದುದು ಜ್ಞಾನ. ಅದನ್ನು ಆಚರಿಸುವುದಕ್ಕೆ ಬೇಕಾದುದು ಶಕ್ತಿ, ಅವಾಪ್ತ ಸಮಸ್ತ ಕಾಮತ್ವ.

ಈ ಎಲ್ಲ ಗುಣಗಳ ಪರಿಪೂರ್ಣತೆಯು ಶ್ರೀಮನ್ನಾರಾಯಣನಲ್ಲೇ ಕಂಡುಬರುವುವು. ಆತನ ಅನುಗ್ರಹ ಕಟಾಕ್ಷವೇ ನಮಗೆ (ಚೇತನರಿಗೆ) ಶ್ರೀರಕ್ಷೆ.

## ಚರಣೌ ಶರಣಂ

ಈ ಶರಣ ಶಬ್ದದ ಮುಖಾಂತರ ಹೇಳಲ್ಪಟ್ಟಿರುವ ದಿವ್ಯಮಂಗಳ ವಿಗ್ರಹವೊಂದೇ ಚೇತ

ನನ ಇಷ್ಟಪ್ರಾಪ್ತಿಗೆ, ಅನಿಷ್ಟ ನಿವಾರಣೆಗೆಲ್ಲದಕ್ಕೂ ತಪ್ಪದ ತಕ್ಕ ಉಪಾಯ. ಈ ಪರಪದ ಪ್ರಾಪ್ತಿ, ಇಷ್ಟ ಪ್ರಾಪ್ತಿಗಳು ಸಂಸಾರ ಸಂಬಂಧದ ವಿಮುಕ್ತಿಗಾಗಿ, ಅದರ ಅನಿಷ್ಟ ನಿವಾರಣೆಗಾಗಿರುವ ಮೂಲ ಮಂತ್ರ. ಈ ಶರಣ ಶಬ್ದದ ಮುಖಾಂತರ ಪ್ರಾಪ್ಯ ನಾದ ಈಶ್ವರನೇ ಪ್ರಾಪಕವೆಂದು ಹೇಳಲ್ಪಡುತ್ತದೆ.

ಲಕ್ಷ್ಮಿ ವಿಶಿಷ್ಟತ್ವ, ಕಲ್ಯಾಣಗುಣ ಯೋಗ, ದಿವ್ಯ ಮಂಗಳ ವಿಗ್ರಹ ವಿಶಿಷ್ಟತ್ವ - ಎನ್ನುವ ಈ ಮೂರೂನು ಚೇತನನಿಗೆ ಅನುಭವವಾಗಿ ಹೇಳಲ್ಪಟ್ಟಿರುವುದರಿಂದ ಪ್ರಾಪ್ಯಗಳಾಗುತ್ತವೆ. ಅಕಿಂಚನನು, ಅನನ್ಯಗತಿಕನು ಆದ ಚೇತನನು ಸ್ವಪ್ರವೃತ್ತಿ ಇಲ್ಲದಿರುವುದರಿಂದ ಭೋಗ್ಯವಾಗಿರುವ ಕ್ಷೀರವನ್ನು ರೋಗಿಯು ನಿವೃತ್ತಿಗಾಗಿ ಪಥ್ಯವಾಗಿ ಸ್ವೀಕರಿಸಿದಂತೆ, ಫಲರೂಪವಾದ ಪರಮಾತ್ಮನನ್ನೆ ಪ್ರಾಪ್ಯವೆಂದು ಪ್ರಾಪಕನೆಂದು ಮಾಡಿಕೊಳ್ಳುವನು 'ಶರಣೌ ಶರಣಂ' ಎನ್ನುವ ಪ್ರಾಪ್ಯ ಪ್ರಾಪಕಗಳಿಗೆ ಏಕತ್ವವನ್ನು ಹುಟ್ಟಿಸುವುದಕ್ಕಾಗಿರುವ ಸಿದ್ಧೋಪಾಯವೆಂದೂ, ಪ್ರಾಪ್ಯಪ್ರಾಪಕಗಳಿಗೆ ಭೇದಗಳುಂಟಾಗಿ ಕರ್ಮ - ಜ್ಞಾನ - ಭಕ್ತಿಯೋಗಾದಿಗಳಿಗಿಂತ ವಿಲಕ್ಷಣವಾದುದೆಂಬ ಅತಿಶಯವು ಸ್ಪಷ್ಟಗೊಳಿಸುತ್ತದೆ.

## ಪ್ರಪದ್ಯೆ

'ಪ್ರಪದ್ಯೆ' ಎಂದರೆ 'ಆಶ್ರಯಿಸಿಕೊಂಡಿದ್ದೇನೆ' ಎನ್ನುವ ಅರ್ಥ 'ಪದಗತೌ' ಎನ್ನುವ ಧಾತುವಿನಿಂದ ಗತಿ ವಾಚಕವಾಗಿ, ವರ್ತಮಾನ ನಿರ್ದೇಶಕವಾಗಿ, ಅನನ್ಯಾರ್ಹ ಶೇಷತ್ವವು ಜ್ಞಾನಕಾರಕವಾಗಿ, ಭಗವದ್ ರಕ್ಷಾನುಮತಿಯಿಂದ ಸರ್ವಾಧಿಕಾರವಾಗಿ, ಭಗವದನುಗ್ರಹ ಪ್ರಾಪ್ತಿಗಾಗಿ ದೃಢಾಧ್ಯವಸಾಯಿ ರೂಪವಾಗಿ, ಜ್ಞಾನ ವಿಶೇಷಣವಾಗಿದೆ.

'ಪ್ರಪದ್ಯೆ' ಎಂದರೆ 'ಆಶ್ರಯಿಸಿಕೊಂಡಿರುವುದು' ಎನ್ನುವುದಲ್ಲವೆ ಅರ್ಥ' ಇದೇ 'ಪ್ರಪತ್ತಿ' ಎನಿಸಿಕೊಳ್ಳುವುದು ಇದನ್ನು ಮಾನಸಿಕ, ವಾಚಿಕ, ಕಾಯಕ ರೂಪಗಳಾದ ತ್ರಿವಿಧ ಕರಣಗಳ ಮುಖಾಂತರ ಆಶ್ರಯಿಸಬೇಕಾದ ಅಗತ್ಯವೇ

ಫಲಸಿದ್ಧಿಗೆ ಪರಮಾತ್ಮನೇ ಉಪಾಯವಾಗಿರುವುದರಿಂದ ಅಧ್ಯವಸಾಯ ರೂಪವಾದ ಮಾನಸ ಸ್ವೀಕಾರ ಒಂದೇ ಸಾಲದು. 'ಜ್ಞಾನಾತ್

### ತಿರುಮಲ - ತಿರುಪತಿ ದೇವಸ್ಥಾನಗಳು - ತಿರುಪತಿ.

### "ಸುದರ್ಶನ" ದ ಮೂಲಕ ಶ್ರೀ ವೆಂಕಟೇಶ್ವರಸ್ವಾಮಿಯ ದರ್ಶನ ಪಡೆಯಿರಿ

★ ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯನ್ನು ದರ್ಶಿಸುವ ಭಕ್ತರು ಗಂಟೆಗಳ ಕಾಲ ಸರದಿಯ ಸಾಲಿನ ಕೋಣೆಗಳಲ್ಲಿ ಕಾದು ಕೂಡುವ ಅಗತ್ಯವಿಲ್ಲದಂತೆ "ಸುದರ್ಶನ" ಟೋಕನ್ ಪದ್ಧತಿಯನ್ನು ಪ್ರವೇಶಗೊಳಿಸಲಾಗಿದೆ.

★ ಈ ಟೋಕನ್‌ಗಳನ್ನು ಉಚಿತವಾಗಿ, ತಿರುಪತಿಯ ಮೊದಲ ಸತ್ರ, ರೈಲ್ವೆ ನಿಲ್ದಾಣದ ಹಿಂಭಾಗದಲ್ಲಿರುವ ಎರಡನೆಯ ಸತ್ರ, ಅಲಿಪಿರಿ ಬಸ್ ನಿಲ್ದಾಣ, ತಿರುಮಲೆಯ ಕೇಂದ್ರ ಸ್ವಾಗತ ಕಚೇರಿಯ ಬಳಿಯಿರುವ ಯಾತ್ರಿಕ ಸೌಲಭ್ಯಗಳ ಸಮುದಾಯ ಭವನದ ಬಳಿ ವೈಕುಂಠಂ ಕ್ಯೂಕಾಂಪ್ಲೆಕ್ಸ್ ಬಳಿ, ರಾಮಬಗೀಚಾ ಅತಿಥಿಗೃಹದ ಬಳಿ ನೀಡಲಾಗುತ್ತದೆ.

★ ತಿರುಪತಿಯನ್ನು ಸೇರಿದ ಕೂಡಲೇ ಈ ಟೋಕನ್‌ಗಳನ್ನು ಪಡೆದಲ್ಲಿ, ಸ್ವಾಮಿಯ ದರ್ಶನ ಎಷ್ಟು ಹೊತ್ತಿಗೆ ಪಡೆಯಬಹುದು ಎಂಬುದನ್ನು ತಿಳಿಯಬಹುದಾಗಿದೆ.

★ ಟೋಕನ್ ನಲ್ಲಿ ಸೂಚಿಸಿರುವ ಸಮಯಕ್ಕೆ ತಾವು ತಿರುಮಲೆಯ ವೈಕುಂಠಂ ಕ್ಯೂ ಕಾಂಪ್ಲೆಕ್ಸ್ ಸೇರಿದರೆ, ಅಲ್ಲಿ ತಮ್ಮ ಟೋಕನ್ ಅನ್ನು ಪರಿಶೀಲಿಸಿ, ರೂ. 5-00 ಲಾಡು ಟೋಕನ್ ಅನ್ನು ನೀಡಿ, ದರ್ಶನದ ಸರದಿಯ ಸಾಲಿನಲ್ಲಿ ಕಳುಹಿಸುವರು.

★ ಸರದಿಯ ಸಾಲನ್ನು ಸೇರಿದ ನಂತರ ಎರಡು ಗಂಟೆಗಳಲ್ಲಿ ಸ್ವಾಮಿಯ ದರ್ಶನ ಆಗುತ್ತದೆ.

★ ತಾವು ಸುದರ್ಶನ ಟೋಕನ್ ಅನ್ನು ಧರಿಸಿ, ಸ್ನಾನವೇ ಮೊದಲಾದ ನಿತ್ಯ ಕೃತ್ಯಗಳನ್ನು ಮಾಡಬಹುದು

★ ಈ ಪದ್ಧತಿಯಿಂದಾಗಿ ತಮಗೆ ದೊರೆಯುವ ಬಿಡುವಿನ ವೇಳೆಯನ್ನು ತಾವು ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ಕಪಿಲತೀರ್ಥ, ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ ಹಾಗೂ ಇತರ ಮುಖ್ಯ ವಿಶೇಷಗಳನ್ನು ಪ್ರತ್ಯೇಕ ಬಸ್‌ಗಳ ಮೂಲಕ ಹೋಗಿ ಸಂದರ್ಶಿಸಬಹುದು.

**ಎಚ್ಚರಿಕೆ :**

1 ಸುದರ್ಶನ ಟೋಕನ್‌ಗಳನ್ನು ತಿರುಮಲೆ - ತಿರುಪತಿ ದೇವಸ್ಥಾನಗಳ ಕೌಂಟರ್‌ಗಳಲ್ಲಿಯೇ ಪಡೆಯಬೇಕು ಹೊರಗಡೆ ತೆಗೆದುಕೊಂಡವುಗಳು ಸಲ್ಲುವುದಿಲ್ಲ.

2. ದರ್ಶನ ಆಗುವವರೆಗೆ ಟೋಕನ್‌ಗಳನ್ನು ತೆಗೆಯಬಾರದು.

3. ಟೋಕನ್‌ಗಳನ್ನು ಇತರರಿಗೆ ನೀಡಬಾರದು.

4 ದಳ್ಳಾಳಿಗಳ ವಂಚಕರ ಮಾತಿಗೆ ಮೋಸ ಹೋಗಬೇಡಿ.

5. ಹತ್ತಿರದ ತಿ ತಿ.ದೇ ಸಮಾಚಾರ ಕೇಂದ್ರಗಳಲ್ಲಿ ವಿಚಾರಿಸಿ.

**ಸುದರ್ಶನ ಮುಲಕ ಸುಲಭತರವಾದ ಸುಖಕರವಾದ ದರ್ಶನ ಪಡೆಯಿರಿ. ತಮ್ಮ ಬಿಡುವಿನ ವೇಳೆಯನ್ನು ಸ್ಥಾನೀಯ ಆಲಯಗಳ ಸಂದರ್ಶನದಲ್ಲಿ ಸಾರ್ಥಕಗೊಳಿಸಿಕೊಳ್ಳಿರಿ.**

**ಕಾರ್ಯನಿರ್ವಹಣಾಧಿಕಾರಿ**

* * *

ಮೋಕ್ಷಮ್ ಎಂದು ಹೇಳಿಲ್ಲವೆ? ಉಪಾಯಾಂತರಗಳ ಮುಖಾಂತರ ಸೇರದೆ, ಸದಾ ಅನುಸಂಧಾನ ಮಾಡುವುದಕ್ಕಾಗಿ 'ಪ್ರಪದ್ಯೆ' ಎನ್ನುವ ವರ್ತಮಾನವು ನಿರ್ದೇಶಿಸಲ್ಪಟ್ಟಿದೆ

ಪ್ರಪತ್ತಿ ಮಾಡುವುದಕ್ಕೆ ಮೊದಲು ಮಾಡದೇಕಾದ ಸಾಧನಾಂತರಗಳ ಬಗ್ಗೆ ಬುದ್ಧಿಯನ್ನು ಮರಳಿಸದೆ, ಪರಮಾತ್ಮನ ಅನುಗ್ರಹವನ್ನು ಉಂಟುಮಾಡುವ ಈ ದ್ವಯ ಮಂತ್ರವನ್ನು ಬಿಡಲು ಅಶಕ್ಯವಾದುದರಿಂದ ವರ್ತಮಾನವಾಗಿರುತ್ತದೆ.

ಉತ್ತರವಾಕ್ಯದ ಮುಖಾಂತರ ಪೂರ್ವ ವಾಕ್ಯಕ್ಕೆ ಸಂಬಂಧ ಪಟ್ಟ ಉಪಾಯದ ಮುಖಾಂತರವೂ ಕೂಡ ಈ ವಾಕ್ಯದಲ್ಲಿನ ಫಲವು ಕೈಂಕರ್ಯ ರೂಪವಾದ ಪ್ರಾಪ್ಯವನ್ನು ಇದು ತಿಳಿಯಹೇಳುವುದು ಇಲ್ಲಿನ ವೈಶಿಷ್ಟ

## ಶ್ರೀಮತೇ

'ಶ್ರೀಮತೇ' ಎಂದರೆ 'ಶ್ರೀ ಮಹಾಲಕ್ಷ್ಮಿಯೊಂದಿಗೆ ಕೂಡಿ ಇರುವವನಿಗಾಗಿ' ಎಂದರ್ಥ. 'ಮತ್' ಪ್ರತ್ಯಯಕ್ಕೆ ನಿತ್ಯಯೋಗವನ್ನು ಅನುಸಂಧಾನ ಮಾಡುವುದು ಇದರ ಅಂತರಾರ್ಥ

ಪರಮಾತ್ಮನು ಉಪಾಯವಾದಾಗ, ಲಕ್ಷ್ಮಿಯು ಪುರುಷಾಕಾರವಾಗಿರುತ್ತಾಳೆ. ಚೇತನರು ಮಾಡುವ ಕೈಂಕರ್ಯಕ್ಕೆ ಪ್ರತಿಯಾಗಿ ತಾನೂನು ಮಿತ್ರಳಾಗಿದ್ದುಕೊಂಡು, ಪ್ರಾಪ್ಯಳಾಗಿ ಹೊಂದುವವಳಂತಹವಳಾಗಿದ್ದು ಪರಮಾತ್ಮನೊಂದಿಗೆ ಮಿತ್ರತ್ವವನ್ನು ಪಡೆದು, ತಾನೂನು ಪ್ರಾಪ್ಯಳಾಗಿದ್ದು ಚೇತನರಿಗೆ ಈಕೆ ವರ್ಧಕಳಾಗಿರುವಳು.

ತಿರುಮಂತ್ರದಲ್ಲಿನ 'ನಾರಾಯಣನಿಗಾಗಿ ಕೈಂಕರ್ಯವು' ಎಂದು ಹೇಳಿ, ಈ ಮಂತ್ರದಲ್ಲಿ ಲಕ್ಷ್ಮಿಯೊಂದಿಗೆ ಕೂಡಿದ ನಾರಾಯಣನಿಗಾಗಿ ಎಂದು ಲೋಕಾಚಾರ್ಯರು ವಿವರಿಸಿದ್ದಾರೆ. ಆದುದರಿಂದಲೇ ಲಕ್ಷ್ಮಣನು ಸೀತೆ, ರಾಮರಿಗೆ (ಶ್ರೀ, ಶ್ರಿಯಪತಿ - ಇಬ್ಬರಿಗೂ ಕೂಡಿ) ಇಬ್ಬರಿಗೂ ಕೂಡಿಯೇ ಸೇವೆ ಮಾಡಿದಂತೆ ಕೈಂಕರ್ಯವನ್ನು ಮಾಡಬೇಕು ತಂದೆ, ತಾಯಿ - ಇಬ್ಬರೂ ಇದ್ದಾಗಲೇ ಅವರ ಸೇವೆ ಮಾಡಬೇಕು ಹಾಗೆ ಕೈಂಕರ್ಯ ಮಾಡುವ ಪುತ್ರನ ಹಿರಿಮೆ ನಿಜವಾಗಲೂ ಉತ್ತಮವಾದುದು ಎಂಬುದು ಆಚಾರ್ಯರ ಅಭಿಪ್ರಾಯ.

ಇದೇ ರೀತಿಯಲ್ಲಿ ಮಹಾಲಕ್ಷ್ಮಿಯಿಂದೊಡಗೂಡಿದ ಶ್ರೀಮನ್ನಾರಾಯಣನ ಸನ್ನಿಧಿಯಲ್ಲಿ ಚೇತನರು ಮಾಡುವ ಕೈಂಕರ್ಯವು ಸಿದ್ಧಿಯನ್ನು ತಪ್ಪದೆ ಪಡೆಯುವುದು, ಆ ಕೈಂಕರ್ಯದ ಸಫಲತೆಯು ಫಲಪ್ರದವಾಗುವುದು - ಎಂದು ಆಚಾರ್ಯರು ತಿಳಿಸುತ್ತಾರೆ

ಈ ರೀತಿಯಲ್ಲಿ ಪುರುಷಾಕಾರತ್ವ - ಉಪಾಯತ್ವಗಳು ಎರಡೂನೂ ಲಕ್ಷ್ಮೀಗೆ ಸ್ವರೂಪಾನುರೂಪವಾಗಿರುತ್ತದೆ.

## ನಾರಾಯಣ

'ನಾರಾಯಣಾಯ' ಎಂದರೆ 'ಎಲ್ಲದಕ್ಕೂ ಶೇಷಿ ಆಗಿರುವವನಿಗಾಗಿ' ಎನ್ನುವ ಅರ್ಥ ಶೇಷಭೂತನು ಮಾಡುವ ಕೈಂಕರ್ಯವನ್ನು ಸಮ್ಮತಿಸುವವನು ಶೇಷಿ. ಈ ನಾರಾಯಣ ಪದದಲ್ಲಿ ಕೈಂಕರ್ಯಕ್ಕೆ ಮೊದಲಿನಲ್ಲಿರುವ ಭಗವದನುಭವಕ್ಕೆ ವಿಷಯಕವಾದ ದಿವ್ಯಮಂಗಳ ವಿಗ್ರಹವು, ಕಲ್ಯಾಣಗುಣಗಳು ಅದರ ಅತ್ಯಗತ್ಯತೆಯನ್ನು ಸ್ಪಷ್ಟಗೊಳಿಸುತ್ತವೆ. ಉಳಿದ ಚತುರ್ಥ್ಯಂಶದ ಮುಖಾಂತರ ಹೇಳಲಾಗುವ ವೃತ್ತಿ ವಿಶೇಷಕ್ಕೆ ಉಳಿದ ಅಂತರಂಗವಾಗಿರುವುದೇ **ಶೇಷತ್ವ**

ಸರ್ವೇಶ್ವರನು ಅನಂತ ಕಲ್ಯಾಣಗುಣ ಪೂರ್ಣನಾದುದರಿಂದ ಆತನಿಂದ ಪಡೆಯುವ ಶೇಷತ್ವವು ಅತ್ಯಂತ ಆನಂದದಾಯಕವಾದುದಾಗಿರುತ್ತದೆ ಈ ಚತುರ್ಥ ಕೈಂಕರ್ಯವನ್ನು ಅದು ಪ್ರಕಾಶಗೊಳಿಸುತ್ತದೆ.

ಆತ್ಮಸ್ವರೂಪವು ನಿತ್ಯವಾದಂತೆ ತದ್ ವೃತ್ತಿಯಾದ ಕೈಂಕರ್ಯವು ನಿತ್ಯವಾಗುತ್ತದೆ ಸರ್ವೇಶ್ವರನು ಸರ್ವಸ್ಮಾತ್ ಪರನಾಗಿರುವುದರಿಂದಲೂ, ಚೇತನನು ಅತ್ಯಂತ ಪರತಂತ್ರನಾಗಿರುವುದರಿಂದಲೂ, ಪ್ರಾರ್ಥನಾ ವಿಶೇಷವು ಇಲ್ಲದಿದ್ದಲ್ಲಿ ಕೈಂಕರ್ಯವು ಸಿದ್ಧಿಸದು ಆದುದರಿಂದ ಪ್ರತಿದಿನವೂ ಸರ್ವೇಶ್ವರನನ್ನು ಪ್ರಾರ್ಥಿಸಬೇಕು

ಶೇಷಿಯಾದ ಸರ್ವೇಶ್ವರನಿಗೆ ಶೇಷವಾದ ಚೇತನನು ಮಾಡುವ ಕೈಂಕರ್ಯಗಳ ಮುಖಾಂತರ ಪ್ರೀತಿ ರೂಪವಾದ ಅತಿಶಯವು ಉಂಟಾಗುವುದು ಇದರಿಂದ ಶೇಷಭೂತನಾದ ತನ್ನ ಸ್ವರೂಪಕ್ಕೆ ಲಾಭವಾಗಿ, ಸ್ವಾಮಿಯಾದ ಸರ್ವೇಶ್ವರ ಮುಖೋಲ್ಲಾಸಕ್ಕೆ ಕಾರಣವಾಗಿರುವುದರಿಂದ ಪ್ರಾಪ್ಯನಾಗಿರುವನು. ಆದುದರಿಂದ ಭಗವತ್, ಭಾಗವತ ಕೈಂಕರ್ಯವನ್ನು ಸದಾ ಕಾಲದಲ್ಲಿಯೂ ಮಾಡುತ್ತಿರಬೇಕು

## ನಮಃ

'ನಮಃ' ಶಬ್ದದ ಅರ್ಥವೆಂದರೆ ನಾನು 'ಸ್ವತಂತ್ರನಲ್ಲ' ಎಂದು ಇಲ್ಲಿ ಭೋಕ್ತನು ನಾನು, 'ಇದು ನನಗೆ ಭೋಗ್ಯವಾಗಿದೆ' ಎನ್ನುವಂತೆ ಕೈಂಕರ್ಯ ಮಾಡುವುದು ತನ್ನ ಕರ್ತವ್ಯವೆಂದು ಮಾಡುವುದರಿಂದ, ತಾನು ಮಾಡುವುದೆಲ್ಲವೂ ಭಗವನ್ಮುಖವಿಕಾಸಕ್ಕೆ ಹೇತುವಾಗುವುದರಿಂದ, ಕೈಂಕರ್ಯಪ್ರಾಪ್ತಿಗೆ ವಿರೋಧಿಗಳಾದವುಗಳನ್ನು ಈ 'ನಮಃ' ಶಬ್ದವು ನಿವರ್ತಿಸುತ್ತದೆ

ಆದುದರಿಂದ 'ದ್ವಯಮಂತ್ರ'ದ ವಿಸ್ತಾರ ರೂಪವಾದ ಗದ್ಯತ್ರಯದಲ್ಲಿ 'ನಮಃ' ಶಬ್ದಾರ್ಥವನ್ನು ಸಾಧಿಸುವ ಸಮಯದಲ್ಲಿ 'ಮನೋವಾಕ್ಕಾಯ' ಮುಂತಾದ ಚೂರ್ಣಿಕೆಗಳ ಮುಖಾಂತರ, ಅಕೃತ್ಯಕರಣ ಮುಂತಾದ ಸಮಸ್ತ ಕರ್ಮಗಳ ನಿವೃತ್ತಿಯನ್ನು ಶ್ರೀ ಭಾಷ್ಯಕಾರರು ಪ್ರಾರ್ಥಿಸುತ್ತಾರೆ

ಕೈಂಕರ್ಯವನ್ನು ಮಾಡುವಾಗ 'ದೇವಾ! ನಿನಗೆ ನಾವು ದಾಸರಾಗಿದ್ದೇವೆ. ನಿನಗೆ ದಾಸರಾಗಿಯೇ ನಿನ್ನೆಲ್ಲ ಆಜ್ಞಾಪಿತ ಕಾರ್ಯಗಳನ್ನು ಮಾಡುತ್ತೇವೆ?' ಎನ್ನುವ ಭಾವವನ್ನು ಹೊಂದಿದ್ದು, ಸಂತಸಚಿತ್ತದಿಂದ ಇರಬೇಕು

ಕೈಂಕರ್ಯ ಪರವಾದ ಇಂತಹ ಪ್ರಾರ್ಥನೆಯಿಂದ 'ನಮಃ' ಎನ್ನುವ ಪದದಲ್ಲಿರುವ ಕೈಂಕರ್ಯ ವಿರೋಧದ ನಿವೃತ್ತಿಗಾಗಿ ಎಲ್ಲ ಸಮಯದಲ್ಲೂ ಸಂತೋಷವಾಗಿ ಇರಬೇಕು

ಈ ರೀತಿಯಲ್ಲಿ ಪುರುಷಾಕಾರ, ಅದರ ನಿತ್ಯಯೋಗ - ಇವುಗಳಿಂದ ಪ್ರಕಾಶಿಸುವ ವಾತ್ಸಲ್ಯಾದಿ ಗುಣಗಳು, ಆ ಗುಣಗಳನ್ನು ಪ್ರಕಾಶಗೊಳಿಸುವ ಭಗವಂತನ ದಿವ್ಯಮಂಗಳ ವಿಗ್ರಹ, ಗುಣವಿಶಿಷ್ಟ ವಸ್ತುವಾದ ಉಪಾಯತ್ವ, ಈ ವಿಷಯಕ್ಕೆ ಸಂಬಂಧಪಟ್ಟಂತೆ ಚೇತನರು ಮಾಡುವ ಭಗವದ್ ಭಾಗವತರ ಕೈಂಕರ್ಯ, ಈ ಕೈಂಕರ್ಯ ವಿರೋಧದ ನಿವೃತ್ತಿಗಾಗಿ ಮಾಡುವ ಸೇವೆ - ಇವೆಲ್ಲವನ್ನೂ ಈ ಪ್ರಕರಣದಲ್ಲಿ ಪಿಳ್ಳೈ ಲೋಕಾಚಾರ್ಯರು ಸ್ಪಷ್ಟಪಡಿಸಿದ್ದಾರೆ. (ಆಧಾರಗಳಿಂದ)

# ಪರಾಶಕ್ತಿಯ ಪಂಚಾವತಾರ

- ಕೆ. ಜಗನ್ನಾಥಶಾಸ್ತ್ರೀ.



ಏಕಂ ಸತ್ ವಿಪ್ರಾಃ
ಬಹುಧಾ ವದನ್ತಿ

ಎನ್ನುವ ಮಾತು ಬಹಳ ಪ್ರಾಚೀನವಾದುದು ಈ ಸತ್ ಎನ್ನುವುದನ್ನು ಪರಬ್ರಹ್ಮಎಂದು ಪ್ರಾಚೀನರೇ ವ್ಯವಹಾರ ಭಾಷೆಯಲ್ಲಿ ಸಂಕೇತಿಸಿದ್ದಾರೆ ಈ ಪರಬ್ರಹ್ಮನಲ್ಲಿ ಪುರುಷ ಮತ್ತು ಪ್ರಕೃತಿ ಎಂಬ ಎರಡು ಶಕ್ತಿಗಳಿವೆ ಪರಬ್ರಹ್ಮನು, ತಾನೇ ಸೃಷ್ಟಿಸಿದ ಚಾತುರ್ವರ್ಣ ರೂಪದ ಮಾನವರ ಮಾನವೀಯ ಧರ್ಮವನ್ನು ಉದ್ಧರಿಸಲು ಅಗತ್ಯವೆನಿಸಿದಾಗ ಅವತಾರ ಮಾಡುತ್ತಾನೆ. ಇದನ್ನು ಸಂಕೇತಿಸುತ್ತಾ -

ಯದಾ ಯದಾ ಹಿ ಧರ್ಮಸ್ಯ
ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನಮಧರ್ಮಸ್ಯ
ತದಾತ್ಮಾನಂ ಸೃಜಾಮ್ಯಹಂ

ಎಂದು ಪುರುಷ ತತ್ವದ ಸಗುಣ ರೂಪವಾದ ಶ್ರೀಕೃಷ್ಣನಿಂದ ವ್ಯಾಸರೂ;

ಇತ್ಥಂ ಯದಾ ಯದಾ ಬಾಧಾ
ದಾನವೋತ್ಥಾ ಭವಿಷ್ಯತಿ
ತದಾ ತದಾ ಅವತೀರ್ಯಾಹಂ
ಕರಿಷ್ಯಾಮಿ ಅರಿಸಂಕ್ಷಯಮ್

ಎಂದು ಶ್ರೀ ಚಂಡಿಕಾ ದೇವಿಯಿಂದ ಮಾರ್ಕಾಂಡೇಯ ಮುನಿಗಳೂ ಹೇಳಿಸಿದ್ದಾರೆ ಪರಬ್ರಹ್ಮನು ಅಗತ್ಯವನ್ನು ಅನುಸರಿಸಿ ಪುರುಷ ರೂಪದಲ್ಲಾಗಲೀ, ಪ್ರಕೃತಿ ರೂಪದಲ್ಲಾಗಲೀ ಅವತಾರ ತಾಳುತ್ತಾನೆ ಈ ಮಾತನ್ನು ಸಮರ್ಥಿಸುವುದಕ್ಕಾಗಿಯೇ ಭಗವದ್ಗೀತೆಯಲ್ಲಿ -

ಅಜೋಽಪಿಸನ್ ಅವ್ಯಯಾತ್ಮಾ
ಭೂತಾನಾಂ ಈಶ್ವರೋಽಪಿಸನ್
ಪ್ರಕೃತಿಂ ಸ್ವಾಂ ಅಧಿಷ್ಠಾಯ
ಸಂಭವಾಮಿ ಆತ್ಮಮಾಯಯಾಃ

ಎಂದು ಹೇಳಿದೆ. ನಾನು ಹುಟ್ಟು ಸಾವುಗಳಿಲ್ಲದ ಅವ್ಯಯಾತ್ಮನಾದರೂ, ಸರ್ವಲೋಕಗಳ ಈಶ್ವರನಾಗಿದ್ದರೂ ನನ್ನದೇ ಆದ ಶುದ್ಧ ಪ್ರಕೃತಿಯನ್ನು ಆಶ್ರಯಿಸಿ, ನನ್ನ ಮಾಯಾ ಶಕ್ತಿಯಿಂದ ಹುಟ್ಟಿಬರುತ್ತೇನೆ - ಎಂಬುದು ಈ ಗೀತೆಯ ಮಾತಿನ ಅರ್ಥ

ಪ್ರಕೃತಿ ತತ್ವ ಪ್ರಧಾನವಾಗಿ ಪರಿಗಣಿಸಿದಾಗ, ಪರಬ್ರಹ್ಮನನ್ನು ಪರಾಶಕ್ತಿ ಎಂಬ ಹೆಸರಿನಿಂದ ವ್ಯವಹರಿಸುತ್ತಾರೆ. ಪುರುಷತತ್ವದ ದಶಾವತಾರಗಳು ಪ್ರಸಿದ್ಧವಾಗಿರುವಂತೆ, ಪರಾಶಕ್ತಿಯ ಪಂಚಾವತಾರಗಳು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಇವೆಲ್ಲವೂ ಆತ್ಮಮಾಯಾ ರೂಪದ ತೇಜಸ್ ತತ್ವದ ಅವತಾರಗಳಾಗಿವೆ.

ಪರಾಶಕ್ತಿಯ ಮೊದಲನೆಯ ಅವತಾರವನ್ನು ಮಹಾಕಾಳಿ ಎಂದು ಸಂಕೇತಿಸಿದ್ದಾರೆ. ಮಹಾ

## ಮಾರಾಟಕ್ಕೆ ಸಿದ್ಧವಾಗಿರುವ ಪುಸ್ತಕಗಳು

**ಶ್ರೀ ವೆಂಕಟೇಶ ಸುಪ್ರಭಾತ**
ವ್ಯಾಖ್ಯಾನಸಹಿತ ಬೆಲೆ 2-50
**ಗುರು ಶ್ರೀಶ ವಿಠಲದಾಸರ ಕೃತಿಗಳು**
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ · 6-00
**ದಾಸತತ್ತ್ವಪ್ರಕಾಶಿಕೆ**
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ · 10-00
**ಸ್ತೋತ್ರಕುಸುಮ ಮಾಲಾ**
ಸಂ - ಎಂ. ಎಸ್ ವೆಂಕಟಾಚಲಂ 3-00
**ತ್ಯಾಗರಾಜಸ್ವಾಮಿ ಕೃತಿಗಳ ಹಲವು ಮುಖಗಳು**
ಎಸ್ ಎಸ್. ಮೂರ್ತಿ ಬೆಲೆ · 5-00
**ಕರ್ನಾಟಕ ಹರಿದಾಸರು**
ತೆಲುಗು, ಹಿಂದಿ, ಆಂಗ್ಲ, ಕನ್ನಡ 2-25
**ಶ್ರೀ ಶ್ರೀನಿವಾಸನ ಹಾಡುಗಳು**
ಪ್ರಸನ್ನ ವೆಂಕಟದಾಸರು
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ : 7-00
**ಕನಕದಾಸರು ಅವರ ಸಾಹಿತ್ಯಸಮೀಕ್ಷೆ**
ಸಂ - ಕೆ ಅಪ್ಪಣ್ಣಾಚಾರ್ಯ 16-00
**ಶ್ರೀದವಿಠಲದಾಸರ ಕೃತಿಗಳು**
ಸಂ - ಕೆ. ಅಪ್ಪಣ್ಣಾಚಾರ್ಯ ಬೆಲೆ · 9-00
**ಉರಗಾದ್ರಿವಾಸ ವಿಠಲದಾಸರ ಜೀವನ ಮತ್ತು ಕೃತಿಗಳು**
ಸಂ - ಕೆ. ಎಂ ಕೃಷ್ಣರಾವ್ ಬೆಲೆ 15-00
**ಶ್ರೀ ಗುರು ವಿಜಯ ವಿಠಲದಾಸರ ಅಷ್ಟಕ**
ಬೆಲೆ 3-00
**ಪುರಂದರೋಪನಿಷತ್**
ಬನ್ನಂಜೆ ಗೋವಿಂದಾಚಾರ್ಯ 6-75
**ನಮ್ಮ ಸಮಸ್ಯೆಗಳಿಗೆ** **7-00**
**ಭಗವದ್ಗೀತೆಯ ಪರಿಹಾರ**
- ಡಾ|| ಎಸ್. ಬಿ. ರಘುನಾಥಾಚಾರ್ಯ
ಗೀತಾಸಾರೋದ್ಧಾರ 14-00
ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು.

ಅಂಚೆ ವೆಚ್ಚ ಪ್ರತ್ಯೇಕ. ಸಗಟು ಖರೀದಿಗೆ ಆಕರ್ಷಕ ಕಮಿಷನ್ ಉಂಟು. ವಿ.ಪಿ.ಪಿ. ಇಲ್ಲ. ಡಿ.ಡಿ. ಗಳನ್ನು ಮಾತ್ರ ಸ್ವೀಕರಿಸಲಾಗುವುದು ಕೂಡಲೇ ಬರೆಯಿರಿ

**ಪುಸ್ತಕಮಾರಾಟ ವಿಭಾಗ,**
ತಿ ತಿ ದೇ. ತಿರುಪತಿ - 517 507

* * * *

ವಿಷ್ಣುವಿನ ಯೋಗನಿದ್ರಾ ಸ್ವರೂಪಿಣಿಯಾದ ಈ ಮಹಾಕಾಳಿಯನ್ನು ಮಹಾಮಾಯಾ ಎಂದೂ ಪರಾಶಕ್ತಿ ಎಂದೂ ಕರೆಯಲಾಗಿದೆ

ಕಲ್ಪಾಂತದಲ್ಲಿ ಸಂಪೂರ್ಣ ಜಗತ್ತು ಮಹಾ ಸಮುದ್ರದಲ್ಲಿ ಮುಳುಗಿತ್ತು. ಆಗ ವಿಷ್ಣುವು ಶೇಷ ಶಾಯಿಯಾಗಿ ಯೋಗನಿದ್ರೆಯಲ್ಲಿ ಇದ್ದನು ಆಗ ಅವನ ಕರ್ಣಕಶ್ಮಲದಿಂದ ಮಹಾ ಕ್ರೂರಿಗಳಾದ ಮಧು ಮತ್ತು ಕೈಟಭ ಎಂಬ ಇಬ್ಬರು ದೈತ್ಯರು ಹುಟ್ಟಿದರು ಹುಟ್ಟಿದ ತಕ್ಷಣ ಅವರ ಕಣ್ಣಿಗೆ, ವಿಷ್ಣುವಿನ ನಾಭಿಕಮಲದಲ್ಲಿದ್ದ ಬ್ರಹ್ಮನ ಮೇಲೆ ಬಿತ್ತು. ತಕ್ಷಣವೇ ಅವರು ಬ್ರಹ್ಮನನ್ನೇ ಕೊಲ್ಲಲು ಮುಂದಾದರು ಆಗ ಇದನ್ನರಿತ ಬ್ರಹ್ಮನು ವಿಷ್ಣುವನ್ನು ಎಚ್ಚರಿಸಲು, ಅವನ ಕಣ್ಣುಗಳಲ್ಲಿ ವಾಸವಾಗಿದ್ದ ಯೋಗ ನಿದ್ರಾಶಕ್ತಿಯನ್ನು ಸ್ತುತಿಸುತ್ತಾ - "ದೇವಿ, ನೀನು ಮೊದಲು ವಿಷ್ಣುವಿನ ಕಣ್ಣುಗಳಿಂದ ಈಚೆಗೆ ಬಂದು ಈ ದೈತ್ಯರು ಮೋಹಾಂಧರಾಗುವಂತೆ ಮಾಡು. ಅನಂತರ ವಿಷ್ಣುವನ್ನು ಎಚ್ಚರಗೊಳಿಸಿ, ಈ ದೈತ್ಯರನ್ನು ಸಂಹರಿಸಲು ಪ್ರೇರೇಪಿಸು" ಎಂದು ಪ್ರಾರ್ಥಿಸಿದನು ಆಗ ಮಹಾಮಾಯೆಯು ವಿಷ್ಣುವಿನ ಕಣ್ಣುಗಳಿಂದ ಹೊರಬಂದು ಬ್ರಹ್ಮನ ಎದುರಿಗೆ ನಿಂತಳು ಯೋಗನಿದ್ರೆಯಿಂದ ಮುಕ್ತನಾದ ವಿಷ್ಣುವು ಎಚ್ಚರಗೊಂಡು ದುರಾತ್ಮರೂ, ಕ್ರೋಧಯುಕ್ತರೂ, ಬ್ರಹ್ಮನನ್ನು ವಧಿಸಲು ಉದ್ಯುಕ್ತರೂ ಆದ ಮಧುಕೈಟಭರನ್ನು ನೋಡಿದನು ಅವರು ವಿಷ್ಣುವನ್ನು ನೋಡುತ್ತಲೇ, ಯುದ್ಧಮಾಡಲು ಮದೋನ್ಮತ್ತರಾಗಿ ಮೇಲೆರಗಿಬಂದರು. ವಿಷ್ಣುವಿಗೂ ಮಧುಕೈಟಭರಿಗೂ ಐದು ಸಾವಿರ ವರ್ಷಗಳವರೆಗೆ ಯುದ್ಧ ನಡೆಯಿತು ಮಹಾಮಾಯೆಯು ತನ್ನ ಪ್ರಭಾವವನ್ನು ಮಧುಕೈಟಭರ ಮೇಲೆ ಬೀರಿದಳು ಆಗ ಅವರು ಯುದ್ಧವನ್ನು ನಿಲ್ಲಿಸಿ, ವಿಷ್ಣುವಿಗೆ - "ನಿನ್ನ ಶೌರ್ಯ ಪರಾಕ್ರಮಗಳನ್ನು ಕಂಡು ನಮಗೆ ಸಂತೋಷವಾಗಿದೆ. ನೀನು ಬೇಕಾದ ವರಗಳನ್ನು ಕೇಳು" ಎಂದರು ಆಗ ವಿಷ್ಣುವು "ನೀವಿಬ್ಬರೂ ನನ್ನಿಂದ ವಧಿಸಲ್ಪಡಬೇಕು ಈ ವರವನ್ನು ಬಿಟ್ಟು ಬೇರೆ ಯಾವವರವೂ ನಮಗೆ ಬೇಡ" ಎಂದನು. ಆಗ ದಾನವರಿಬ್ಬರೂ ಸುತ್ತಲೂ ಒಂದು ಸಲ ನೋಡಿದರು ಎಲ್ಲ ಕಡೆಯು ನೀರೇ ಆವರಿಸಿತ್ತು ಭೂಮಿಯೇ ಅವರಿಗೆ ಕಾಣಿಸಲಿಲ್ಲ ಆಗ ಅವರು ಮಹಾಕಾಳಿಯ ಮಾಯೆಗೆ ಒಳಗಾಗಿ ವಿಷ್ಣುವಿಗೆ - "ಹಾಗಾದರೆ, ನೀರಿನಿಂದ ಆವರಿಸಲ್ಪಡದ ಭೂಮಿಯ ಮೇಲೆ ನಮ್ಮನ್ನು ವಧಿಸು" ಎಂದರು. ಆ ಮಾತಿಗೆ ಒಪ್ಪಿದ ವಿಷ್ಣುವು ತನ್ನ ವಿಸ್ತಾರವಾದ ತೊಡೆಯನ್ನೇ ಭೂಮಿಯನ್ನಾಗಿ ಮಾಡಿ, ಅವರನ್ನು ಚಕ್ರದಿಂದ ಸಂಹರಿಸಿದನು.

ಹೀಗೆ ತನ್ನ ಮಾಯಾ ರೂಪದಿಂದ ದಾನವರನ್ನು ವಧಿಸಲು ಕಾರಣಳಾದ ಮಹಾಮಾಯಾ ದೇವಿಯನ್ನು ಬ್ರಹ್ಮಾದಿ ದೇವತೆಗಳೂ, ಋಷಿ ಮುನಿಗಳೂ ಸ್ತುತಿಸಿ ಕೃತಾರ್ಥರಾದರು ಇವಳು ಸಕಲ ತೇಜಸ್ವಿನಿ, ಅಧಿಷ್ಠಾತ್ರಿ. ಇವಳ ಆರಾಧನೆಯಿಂದ, ಇವಳ ಮಂಗಳ ಕಥಾವಾಚನದಿಂದ ಅಥವಾ ಶ್ರವಣದಿಂದ ದುಃಖಶೋಕಗಳು ದೂರವಾಗುತ್ತವೆ

ಪರಾಶಕ್ತಿಯ ಎರಡನೆಯ ಅವತಾರವೇ ಮಹಾಲಕ್ಷ್ಮಿರೂಪ. ದೇವತೆಗಳ ತೇಜಸ್ಸನ್ನು ಇಲ್ಲಿ ಮಹಾಲಕ್ಷ್ಮಿ ಎಂದು ಕರೆಯಲಾಗಿದೆ.

ಒಮ್ಮೆ ದೇವೇಂದ್ರನು ದೇವಲೋಕಕ್ಕೂ, ಮಹಿಷಾಸುರನು ಭೂಲೋಕಕ್ಕು ರಾಜರಾಗಿದ್ದರು. ಮಹಿಷಾಸುರನು ಶಿವನನ್ನು ಕುರಿತು ತಪಸ್ಸು ಮಾಡಿ, ಸ್ತ್ರೀಯಿಂದ ವಿನಾ ಬೇರೆ ಯಾರಿಂದಲೂ ಮರಣವಾಗದಂತಹ ವರವನ್ನು ಪಡೆದಿದ್ದ. ಮೊದಲಿನಿಂದಲೂ ದೇವತೆಗಳಿಗೂ ರಾಕ್ಷಸರಿಗೂ ಬದ್ಧವೈರ. ಮಹಿಷಾಸುರ ದೇವಲೋಕಕ್ಕೆ ಮುತ್ತಿಗೆ ಹಾಕಿ, ಇಂದ್ರನನ್ನು ಗೆದ್ದು, ಅಮರಾವತಿಗೆ ಅರಸನಾದನು. ಪದಭ್ರಷ್ಟರಾದ ದೇವತೆಗಳು ಬ್ರಹ್ಮನೊಂದಿಗೆ ವಿಷ್ಣು ಶಿವರಿದ್ದಲ್ಲಿಗೆ ಬಂದರು. ಮಹಿಷಾಸುರನ ಉಪಟಳವನ್ನು ತಿಳಿಸಿದರು. ಆಗ ಕೋಪಗೊಂಡ ವಿಷ್ಣುವಿನ ಮುಖದಿಂದ ದಿವ್ಯತೇಜಸ್ಸೊಂದು ಹೊರಬಂದಿತು. ಆ ತಕ್ಷಣವೇ ಶಿವ ಬ್ರಹ್ಮಮುಂತಾದ ದೇವತೆಗಳಿಗೂ ಕೋಪಬಂದು, ಅವರ ಮುಖಗಳಿಂದಲೂ ದಿವ್ಯ ತೇಜಸ್ಸು ಹೊರಬಂದವು. ಆಮೇಲೆ ಅವುಗಳೆಲ್ಲ ಸೇರಿ ಒಂದು ಸ್ತ್ರೀ ರೂಪವನ್ನು ಪಡೆದುವು. ಶಿವನ ತೇಜಸ್ಸು ಮುಖವಾಯಿತು. ಯಮನ ತೇಜಸ್ಸು ತಲೆಕೂದಲಾಯಿತು. ವಿಷ್ಣುವಿನ ತೇಜಸ್ಸು ಬಾಹುಗಳಾದುವು. ಚಂದ್ರನ ತೇಜಸ್ಸು ಸ್ತನಗಳಾದುವು. ಇಂದ್ರನ ತೇಜಸ್ಸು ಕಟಿಪ್ರದೇಶವಾಯಿತು. ವರುಣನ ತೇಜಸ್ಸು ಜಂಘೋರುಗಳಾದವು. ಪೃಥ್ವಿಯ ತೇಜಸ್ಸು ಪಾದಗಳಾದುವು. ಸೂರ್ಯನ ತೇಜಸ್ಸು ಪಾದಾಂಗುಳಿಗಳಾದವು. ವಸುಗಳ ತೇಜಸ್ಸು ಕರಾಂಗುಳಿಗಳಾ

ದುವು. ಕುಬೇರನದು ನಾಸಿಕವಾಯಿತು. ಪ್ರಜಾಪತಿಯದು ದಂತ ಪಂಕ್ತಿಗಳಾದುವು. ಅಗ್ನಿಯ ತೇಜಸ್ಸು ನಯನತ್ರಯವಾಯಿತು. ಸಂಧ್ಯೆಯ ತೇಜಸ್ಸು ಹುಬ್ಬುಗಳಾದುವು. ವಾಯುವಿನ ತೇಜಸ್ಸು ಕಿವಿಗಳಾದುವು. ಹೀಗೆ ಸರ್ವದೇವತೆಗಳ ತೇಜಸ್ಸುಗಳೂ ಸೇರಿ ಸ್ತ್ರೀ ರೂಪದಲ್ಲಿ ಬ್ರಹ್ಮಾದಿಗಳ ಎದುರಿಗೆ ನಿಂತವು. ಆಗ ಎಲ್ಲ ದೇವತೆಗಳೂ ತಮ್ಮ ತಮ್ಮ ಆಯುಧಗಳನ್ನೂ, ವಾಹನಗಳನ್ನೂ, ದಿವ್ಯಾಸ್ತ್ರಗಳನ್ನೂ, ಆಭರಣಗಳನ್ನೂ, ದಿವ್ಯಕವಚಗಳನ್ನೂ ಕೊಟ್ಟು, ಅವಳನ್ನು ಮಹಾಲಕ್ಷ್ಮಿ ಎಂದು ಕರೆದು, ಮಹಿಷಾಸುರನನ್ನು ಸಂಹರಿಸುವಂತೆ ಪ್ರಾರ್ಥಿಸಿದರು.

ಮಹಾಲಕ್ಷ್ಮಿಯು ಕೋಪೋದ್ರಿಕ್ತಳಾಗಿ ಸಿಂಹನಾದ ಗೈದು ಮಹಿಷಾಸುರನ ಮೇಲೆ ಯುದ್ಧಕ್ಕೆ ಹೊರಟಳು . ಪ್ರಾರಂಭದಲ್ಲಿ ಮಹಿಷಾಸುರನ ಸೇನಾನಾಯಕರಾದ ಚಿಕ್ಷುರ, ಉದಗ್ರ, ಮಹಾಹನು, ಅಸಿಲೋಮ, ಬಾಷ್ಕಲ, ಬಿಡಾಲ, ಮುಂತಾದವರು ತಮ್ಮ ಸೈನ್ಯಗಳೊಂದಿಗೆ ಬಂದು, ಯುದ್ಧಮಾಡಿ ಸತ್ತುಹೋದರು. ಕೊನೆಯಲ್ಲಿ ಸ್ವಯಂ ಮಹಿಷಾಸುರನೇ ಯುದ್ಧಕ್ಕೆ ಬಂದನು ಶ್ರೀ ಮಹಾಲಕ್ಷ್ಮಿಯು ದಾನವ ಸೈನಿಕರನ್ನು ಘಂಟಾನಾದದಿಂದಲೂ, ಪಾಶದಿಂದಲೂ, ಖಡ್ಗ ಪ್ರಹಾರದಿಂದಲೂ, ಗದಾಘಾತದಿಂದಲೂ, ಶೂಲಾಯುಧದಿಂದಲೂ ನಾಶಮಾಡಿದಳು. ಕ್ರುದ್ಧನಾದ ಮಹಿಷನು ಮಹಿಷರೂಪವನ್ನು ತಾಳಿ, ಶ್ರೀ ದೇವಿಯ ವಾಹನವಾದ ಸಿಂಹವನ್ನು ಆಕ್ರಮಿಸಲು ಪ್ರಯತ್ನಿಸಿದನು. ಶ್ರೀ ದೇವಿಯು ಅವನನ್ನು ತಡೆದಳು. ಮಹಿಷಾಸುರನು ಅನೇಕ ರೀತಿಯ ಮಾಯಾ ಯುದ್ಧವನ್ನು ಮಾಡಿದನು. ಅವೆಲ್ಲವನ್ನೂ ಶ್ರೀ ದೇವಿಯು ನಿಷ್ಫಲಗೊಳಿಸಿದಳು.

ಕೊನೆಗೆ ಮಹಿಷರೂಪವನ್ನು ಪಡೆದು ದೇವಿಯ ಮೇಲೆ ಏರಿಬಂದನು ಆಗ ದೇವಿಯು ದೇವಯೋಗ್ಯವಾದ ಮಧುವನ್ನು ಕುಡಿದು ಮದೋನ್ಮತ್ತಳಾಗಿ, ದಾನವವನ್ನು ಕಾಲಿನಿಂದ ಮೆಟ್ಟಿ, ಶೂಲದಿಂದ ಅವನ ಕಂಠವನ್ನು ಇರಿದಳು ಅಷ್ಟರಲ್ಲಿ ಅವನು ರಾಕ್ಷಸ ರೂಪವನ್ನು ಪಡೆದು ಈಚೆಗೆ ಬರಲು ಪ್ರಯತ್ನಿಸಿದನು ಆಗ ದೇವಿಯು ಅವನನ್ನು ತಡೆದು, ಅವನು ಅರ್ಧಶರೀರ ರೂಪದಲ್ಲಿರುವುವಾಗಲೇ ಅವನ ತಲೆಯನ್ನು ಖಡ್ಗದಿಂದ ತುಂಡರಿಸಿ ಹಾಕಿದಳು. ಇದನ್ನು ಕಂಡ ಅವನ ಸೈನಿಕರೂ, ಸೇನಾಪತಿಗಳೂ, ರಣರಂಗದಿಂದ ಓಡಿಹೋದರು ಅನಂತರ ದೇವತೆಗಳೂ ಋಷಿಗಳೂ ಸಂತೋಷಗೊಂಡು ಶ್ರೀ ದೇವಿಯನ್ನು ಸ್ತುತಿಸಿದರು. ಜಗತ್ತು ನೆಮ್ಮದಿಯನ್ನು ಪಡೆದು, ಶ್ರೀ ದೇವಿಯನ್ನು ಸ್ತುತಿಸಿ ಪೂಜಿಸಿತು.

ಈ ಮಹಾಲಕ್ಷ್ಮಿಯನ್ನು ಶ್ರೀ ಹರಿಯ ಶಕ್ತಿಸ್ವರೂಪಿಣಿ ಎಂದು ಭಾವಿಸಲಾಗಿದೆ ಹಾಗಾಗಿ ಈ ಮಹಾಲಕ್ಷ್ಮಿಯು ಜಗತ್ತಿನ ಸಂಪತ್ತಿನ ಅಧಿಷ್ಠಾತೃ ದೇವತೆಯಾಗಿದ್ದಾಳೆ. ಈ ದೇವಿಯು ಪರಮ ಸುಂದರಿಯೂ, ಅನುಪಮ ಸಂಯಮಶೀಲಳೂ ಶಾಂತಸ್ವಭಾವದವಳೂ, ಅರಿಷಡ್ವರ್ಗನಾಶಿನಿಯೂ ಆಗಿ ವರ್ಣಿತಳಾಗಿದ್ದಾಳೆ ಮತ್ತು ಆರಾಧಿಸಲ್ಪಡುತ್ತಿದ್ದಾಳೆ.

ಪರಾಶಕ್ತಿಯ ಮೂರನೆಯ ಅವತಾರವನ್ನು ಮಹಾಸರಸ್ವತಿ ಎಂದು ಸಂಕೇತಿಸಿದ್ದಾರೆ. ಶ್ರೀ ಪಾರ್ವತಿಯ ದೇಹದಿಂದ ಈಚೆಗೆ ಬಂದ ದಿವ್ಯ ತೇಜಸ್ಸಿನ ರೂಪವನ್ನೇ ಮಹಾಸರಸ್ವತಿ ಎಂದು ಕರೆದಿದ್ದಾರೆ

ಒಮ್ಮೆ ದೇವಲೋಕದಲ್ಲಿ ದೇವೇಂದ್ರನೂ, ಭೂಲೋಕದಲ್ಲಿ ಶುಂಭ ಎಂಬ ದಾನವನೂ ಅರಸರಾಗಿದ್ದರು. ಈ ಶುಂಭನಿಗೆ ನಿಶುಂಭ ಎಂಬ ತಮ್ಮನಿದ್ದನು. ಅವನು ಯುವರಾಜನಾಗಿದ್ದನು. ಇವರಿಬ್ಬರೂ ಮಹಾದುರಹಂಕಾರಿಗಳೂ, ದುಷ್ಟರೂ, ಕ್ರೂರಿಗಳೂ ಆಗಿದ್ದರು. ದಾನವೀಯ ಸ್ವಭಾವಕ್ಕೆ ತಕ್ಕಂತೆ ಇವರು ಅಮರಾವತಿಯನ್ನು ಮುತ್ತಿ, ಇಂದ್ರನನ್ನು ಗೆದ್ದು, ದೇವಲೋಕದಲ್ಲಿ ತಮ್ಮ ಆಧಿಪತ್ಯವನ್ನು ಸ್ಥಾಪಿಸಿಕೊಂಡರು.

ಇಂದ್ರನು ಇತರ ದೇವತೆಗಳೊಂದಿಗೆ, ಹಿಮಾಲಯ ಪರ್ವತ ಪ್ರದೇಶದಲ್ಲಿದ್ದ ಶ್ರೀ ಗಿರಿಜೆಯ ಬಳಿಗೆ ಬಂದು, ತಮ್ಮ ಕಷ್ಟವನ್ನು ಹೇಳಿಕೊಂಡು, ಈ ದಾನವರನ್ನು ಕೊಂದು, ತಮ್ಮನ್ನು ರಕ್ಷಿಸದೇಕೆಂದು ಪ್ರಾರ್ಥಿಸಿದರು. ದಾನವರ ಉಪಟಳವನ್ನು ಕೇಳಿದ ಗಿರಿಜೆಗೆ, ದೇವತೆಗಳ ಬಗೆಗೆ ಕರುಣೆಯುಂಟಾಗಿ ಅವಳ ಶರೀರದಿಂದ ದಿವ್ಯ ತೇಜಸ್ಸೊಂದು ಸ್ತ್ರೀರೂಪದಲ್ಲಿ ಈಚೆಗೆ ಬಂದಿತು. ಶ್ರೀ ಗಿರಿಜೆಯ ಶರೀರಕೋಶದಿಂದ ಈಚೆಗೆ ಬಂದದ್ದರಿಂದ ಈ ದಿವ್ಯತೇಜಸ್ಸನ್ನು ಕೌಶಿಕೀ ಎಂದು ಕರೆದರು

ಕೌಶಿಕೀ ದೇವಿಯು ಈ ದುಷ್ಟ ದಾನವ ಸಹೋದರರನ್ನು ಸಂಹರಿಸುವ ದೃಷ್ಟಿಯಿಂದ



ಸ್ಫುರದ್ರೂಪಿಣಿಯಾಗಿ, ಶಿವ ಮತ್ತು ಅಷ್ಟಗೆಳತಿಯರೊಂದಿಗೆ ಬಂದು ಹಿಮಾಲಯ ಪ್ರದೇಶದಲ್ಲಿದ್ದ ಶುಂಭ, ನಿಶುಂಭರ ನಗರದ ಸಮೀಪವಿರುವ ಉದ್ಯಾನವನಕ್ಕೆ ಬಂದು, ವಿಹಾರಾರ್ಥ ತಿರುಗಾಡುತ್ತಿದ್ದಳು. ಆ ಉದ್ಯಾನವನದಲ್ಲಿದ್ದ ಈ ಸುಂದರಿಯನ್ನು ನೋಡಿದ ಚಂಡ ಮತ್ತು ಮುಂಡ ಎಂಬ ಸೇವಕರು ತಕ್ಷಣವೇ ಬಂದು, ಶುಂಭನಿಗೆ ವಿಷಯವನ್ನು ತಿಳಿಸಿದರು. ಸುಂದರ ಸ್ತ್ರೀಯ ರೂಪಲಾವಣ್ಯಗಳನ್ನು ಕೇಳಿ ಆಕರ್ಷಿತನಾದ ಶುಂಭನು, ಉಪಾಯಾಂತರದಿಂದ ಅವಳನ್ನು ಕರೆತರುವಂತೆ ಆಜ್ಞಾಪಿಸಿ, ಸುಗ್ರೀವ ಎಂಬುವವನನ್ನು ದೂತನನ್ನಾಗಿ ಶ್ರೀ ದೇವಿಯ ಬಳಿಗೆ ತಿಳಿಸಿದನು. ಸುಗ್ರೀವನು ದೇವಿಯ ಬಳಿಗೆ ಬಂದು ಶುಂಭ ನಿಶುಂಭರ ಸಂಪತ್ತನ್ನೂ, ಪರಾಕ್ರಮವನ್ನೂ ವರ್ಣಿಸಿ, ಅವರ ಪತ್ನಿಯಾಗುವಂತೆ ಪ್ರೇರೇಪಿಸಿದನು. ಸುಗ್ರೀವನ ಮಾತುಗಳನ್ನು ಕೇಳಿ ದೇವಿಯು - ಅವರು ಪರಾಕ್ರಮಶಾಲಿಗಳೇನೋ ಹೌದು. ಆದರೆ ನಾನು ಚಿಕ್ಕವಳಿದ್ದಾಗ, ಯಾರು ನನ್ನನ್ನು ಯುದ್ಧದಲ್ಲಿ ಜಯಿಸುತ್ತಾರೋ ಅವರನ್ನೇ ವಿವಾಹವಾಗುವುದಾಗಿ ಪ್ರತಿಜ್ಞೆ ಮಾಡಿದ್ದೇನೆ ಶುಂಭ ನಿಶುಂಭರಲ್ಲಿ ಯಾರು ನನ್ನನ್ನು ಜಯಿಸುತ್ತಾರೋ ಅವರನ್ನೇ

ವಿವಾಹವಾಗುತ್ತೇನೆ ಇದನ್ನು ಅವರಿಗೆ ತಿಳಿಸು" ಎಂದಳು ಸುಗ್ರೀವನು ಬಂದು ಈ ವಿಷಯವನ್ನು ಶುಂಭ ನಿಶುಂಭರಿಗೆ ಹೇಳಿದನು. ಕೋಪಗೊಂಡ ಶುಂಭನು, ಸೈನ್ಯದೊಡನೆ, ಯುದ್ಧ ಮಾಡಿ ಅವಳನ್ನು ಗೆದ್ದು ತರಲು ಧೂಮ್ರಲೋಚನನ್ನ ಕಳಿಸಿದನು. ಧೂಮ್ರಲೋಚನನು ದೇವಿಯ ಬಳಿಗೆ ಬಂದು, ಯುದ್ಧಮಾಡುವಂತೆ ತಿಳಿಸಿದನು ದೇವಿಯು ಕೋಪದಿಂದ ಅವನನ್ನು ನೋಡಿ, ಸುಟ್ಟುಹಾಕಿದಳು ಅವಳ ವಾಹನವಾದ ಸಿಂಹವು ಆ ದೈತ್ಯನ ಸೈನ್ಯವನ್ನು ನಾಶ ಮಾಡಿತು. ಅನಂತರ ಪ್ರಚಂಡ ಸೈನ್ಯದೊಡನೆ ಚಂಡಮುಂಡರನ್ನೂ ಶುಂಭನಿಶುಂಭರು ಕಳಿಸಿದರು ಅವರ ಅಟ್ಟಹಾಸವನ್ನು ಕಂಡು ದೇವಿಗೆ ಕೋಪವು ಉಕ್ಕೇರಿತು ಆಗ ಅವಳ ದೇಹದಿಂದ ಒಬ್ಬ ಶಕ್ತಿ ದೇವತೆಯು ಈಚೆಗೆ ಬಂದಳು. ಅವಳನ್ನು ದೇವತೆಗಳು ಕಾಳಿ ಎಂದು ಕರೆದರು. ಈ ಕಾಳಿಯು ಚಂಡಮುಂಡರನ್ನು ಸಂಹರಿಸಿದಳು ಆ ಮೇಲೆ ದಾನವ ಸೈನ್ಯವು ಹೆದರಿ ಓಡಿ ಹೋಯಿತು. ಚಂಡಮುಂಡರನ್ನು ಕೊಂದದ್ದರಿಂದ, ಕಾಳಿಯನ್ನು ಶ್ರೀ ದೇವಿಯು ಚಾಮುಂಡಾ ಎಂದು ಕರೆದಳು. ಅನಂತರ ಶುಂಭ ನಿಶುಂಭರೇ ವೈವಿಧ್ಯಮಯವಾದ ಸೈನ್ಯದೊಡನೆ ಉದ್ಯಾನದ ಬಳಿ ಬಂದು ಬೀಡುಬಿಟ್ಟರು. ಆಗ ಎಲ್ಲ ದೇವತೆಗಳೂ ತಮ್ಮ ತಮ್ಮ ಶಕ್ತಿದೇವತೆಯರನ್ನು, ಆಯುಧ ಮತ್ತು ವಾಹನಗಳೊಡನೆ ದೇವಿಯ ಸಹಾಯಕ್ಕೆ ಕಳಿಸಿದರು. ಆ ದೈತ್ಯರ ಅಟ್ಟಹಾಸವನ್ನು ಕಂಡು ಶ್ರೀದೇವಿಗೆ ಕೋಪಬಂದಿತು ಆಗ ಅವಳ ದೇಹದಿಂದ ಒಂದು ದಿವ್ಯಶಕ್ತಿಯು ಸ್ತ್ರೀರೂಪವನ್ನು ಪಡೆದು ರೌದ್ರಾಕಾರವಾಗಿ ಈಚೆಗೆ ಬಂದಿತು ಅದನ್ನು ದೇವತೆಗಳು ಚಂಡಿಕಾ ಎಂದು ಕರೆದರು. ಈ ಚಂಡಿಕಾದೇವಿಯು ತನ್ನೊಡನಿದ್ದ ಶಿವನಿಗೆ - "ನೀವು ಹೋಗಿ ದೈತ್ಯನಿಗೆ, ದೇವತೆಗಳ ರಾಜ್ಯವನ್ನು ಅವರಿಗೆ ಕೊಟ್ಟು ನೀವು ಪಾತಾಳಕ್ಕೆ ಹೋಗಿ ಬದುಕಿರಿ. ಇಲ್ಲವಾದರೆ ಯುದ್ಧಮಾಡಲು ಬನ್ನಿ ಎಂದು ತಿಳಿಸಿರಿ" ಎಂದಳು ಶಿವನು ಆ ದೈತ್ಯರ ಬಳಿಗೆ ಬಂದು ದೇವಿಯ ಸಂದೇಶವನ್ನು ತಿಳಿಸಿದನು. ಕೋಪಗೊಂಡ ದೈತ್ಯರು ಯುದ್ಧ ಮಾಡಲು ಸಿದ್ಧರಾಗಿಯೇ ಬಂದರು ಅವರ ಸೈನ್ಯದಲ್ಲಿ ರಕ್ತಬೀಜನೆಂಬ ರಾಕ್ಷಸನೊಬ್ಬನಿದ್ದನು ಅವನ ದೇಹದಿಂದ ಒಂದು ತೊಟ್ಟು ರಕ್ತ ಭೂಮಿಯ ಮೇಲೆ ಬಿದ್ದರೂ ಅವನಷ್ಟೇ ವೀರರಾದ ರಾಕ್ಷಸರು ಹುಟ್ಟುತ್ತಿದ್ದರು ಇದನ್ನರಿತ ಚಂಡಿಕೆಯು ರಕ್ತಬೀಜನ ರಕ್ತದಿಂದ ಹುಟ್ಟುವ ದೈತ್ಯರನ್ನು ತಿನ್ನುವಂತೆ ಕಾಳಿಕಾದೇವಿಗೆ ಹೇಳಿದಳು ಕಾಳಿಕಾದೇವಿಯು ಹಾಗೆಯೇ ಮಾಡಿದಳು. ಅದರಿಂದ ರಕ್ತಬೀಜನ ಶಕ್ತಿ ಕುಂಠಿತವಾಯಿತು. ಆಗ ಚಂಡಿಕಾದೇವಿಯು ರಕ್ತ ಬೀಜನನ್ನು ಕೊಂದಳು ಆ ಮೇಲೆ ನಿಶುಂಭನು ಯುದ್ಧಮಾಡಲು ಬಂದು, ದೇವಿಯ ಶೂಲಾಘಾತಕ್ಕೆ ಗುರಿಯಾಗಿ ಸತ್ತುಹೋದನು. ಕೊನೆಗೆ ಶುಂಭನೇ ಯುದ್ಧಕ್ಕೆ ಬಂದನು. ಆಗ ದೇವಿಯ ದೇಹದಿಂದ ಈಚೆಗೆ ಬಂದಿದ್ದ ಶಕ್ತಿ ದೇವತೆಗಳೆಲ್ಲರೂ ಪುನಃ ಶ್ರೀದೇವಿಯ ದೇಹವನ್ನು ಸೇರಿಕೊಂಡರು ಅನಂತರ ಶುಂಭನಿಗೂ ಶ್ರೀದೇವಿಗೂ ಭೀಕರ ಯುದ್ಧ ನಡೆದು ಶುಂಭನು ವಧಿಸಲ್ಪಟ್ಟನು. ಈ ಶುಂಭ ನಿಶುಂಭರ ಮರಣದಿಂದ ದೇವತೆಗಳು ಸಂತೋಷಗೊಂಡರು, ಜಗತ್ತು ನೆಮ್ಮದಿಯನ್ನು ನಡೆಯಿತು

ಈ ಶುಂಭ ನಿಶುಂಭ ಹಾರಿಣಿಯಾದ ದೇವಿಯನ್ನು ಶ್ರೀ ವಿದ್ಯಾರೂಪಿಣಿ ಎಂದೂ, ಬುದ್ಧಿ, ಮೇಧಾ, ಪ್ರತಿಭಾ, ಸ್ಮರಣ ಶಕ್ತಿಗಳ ಮತ್ತು ಸಂಗೀತ ನೃತ್ಯಾದಿ ಕಲೆಗಳ ಅಧಿಷ್ಠಾತ್ರಿ ಎಂದೂ ಕರೆದರು ಇವಳ ಕೃಪೆಯಿಂದ ಸರ್ವ ಸಂಶಯಗಳೂ ನಿವೃತ್ತವಾಗುತ್ತವೆ. ಇವಳು ಸತ್ವಸ್ವರೂಪಗಳು. ಇವಳ ಆರಾಧನೆಯಿಂದ ಜಗತ್ತು ನಿರಾಮಯವಾಗುತ್ತದೆ.

ಪರಾಶಕ್ತಿಯ ನಾಲ್ಕನೆಯ ಅವತಾರವನ್ನು ಶ್ರೀ ದುರ್ಗಾ ಎಂದು ಸಂಕೇತಿಸಲಾಗಿದೆ ಇವಳು ಶಿವನ ಪ್ರಕೃತಿದತ್ತವಾದ ಶಿವಾಶಕ್ತಿಯಿಂದ ಪ್ರಾದುರ್ಭವಿಸಿದವಳು.

ವಿಂಧ್ಯಪರ್ವತ ಪ್ರದೇಶದಲ್ಲಿ ಒಂದು ದಾನವ ರಾಜ್ಯ. ಅದರ ಅಧಿಪತಿ ರುರು ಎಂಬ ದಾನವ ಅವನ ಮಗ ದುರ್ಗಮ ಇವನು ತಪಸ್ಸು ಮಾಡಿ ಪುರುಷರಿಂದ ಅಜೇಯವಾದ ವರವನ್ನು ಬ್ರಹ್ಮನಿಂದ ಪಡೆದನು. ಇವನು ವರಪ್ರಾಪ್ತಿಯಾಗುತ್ತಿದ್ದಂತೆ ದೇವಲೋಕಕ್ಕೆ ಮುತ್ತಿಗೆ ಹಾಕಿ ಗೆದ್ದು, ದೇವೇಂದ್ರನನ್ನೂ ಇತರ ದೇವತೆಗಳನ್ನೂ ಅಮರಾವತಿಯಿಂದ ಓಡಿಸಿ, ತಾನೇ ಅಧಿಕಾರ ಮಾಡಲಾರಂಭಿಸಿದನು. ಇದರ ಪರಿಣಾಮವಾಗಿ, ಧರ್ಮ ಕಾರ್ಯಗಳು ಲೋಪಗೊಂಡು ಅಧರ್ಮವು ವೃದ್ಧಿಯಾಯಿತು. ದೇವೇಂದ್ರನು ದೇವತೆಗಳೊಂದಿಗೆ ಕೈಲಾಸಕ್ಕೆ ಬಂದು, ಮಹೇಶ್ವರನ ಮೊರೆ ಹೊಕ್ಕರು. ಮಹೇಶ್ವರನು ದುರ್ಗಮನು ಪಡೆದ ವರದ ಸೂಕ್ಷ್ಮತೆಯನ್ನು ಅರಿತು, ಶ್ರೀ ದೇವಿಯನ್ನು, ದಾನವನನ್ನು ಸಂಹರಿಸುವಂತೆ ಪ್ರೇರೇಪಿಸಿದನು ಶ್ರೀ ದೇವಿಯು ಇದನ್ನು ಒಪ್ಪಿ, ವಿಂಧ್ಯಪರ್ವತ ಪ್ರದೇಶಕ್ಕೆ ಬಂದಳು. ತನ್ನ ತೇಜಶ್ಶಕ್ತಿಯಿಂದ ತ್ರಿಲೋಕಸುಂದರಿಯೊಬ್ಬಳನ್ನು ಸೃಷ್ಟಿಸಿದಳು. ಅವಳ ಹೆಸರು ಕಾಳರಾತ್ರಿ. ದೇವತೆಗಳ ರಾಜ್ಯವನ್ನು ದೇವತೆಗಳಿಗೆ ಹಿಂತಿರುಗಿಸಿ, ಭೂಲೋಕದಲ್ಲಿ ಧರ್ಮಕಾರ್ಯಗಳು ನಡೆಯುವಂತೆ ಮಾಡದೇಕೆಂಬ ಸಂದೇಶದೊಂದಿಗೆ ಶ್ರೀ ದೇವಿಯು ಕಾಳರಾತ್ರಿಯನ್ನು ದಾನವನಿದ್ದಲ್ಲಿಗೆ ಕಳಿಸಿದಳು. ಅವಳು ಒಂದು ದುರ್ಗಮನಿಗೆ ದೇವಿಯ ಸಂದೇಶವನ್ನು ತಿಳಿಸಿದಳು.

ದುರ್ಗಮನು, ಕಾಳ ರಾತ್ರಿಯ ಸೌಂದರ್ಯಕ್ಕೆ ಆಕರ್ಷಿತನಾದ್ದರಿಂದ, ಅವಳ ಮಾತುಗಳನ್ನು ಕೇಳುವಷ್ಟು ಸಂಯಮವನ್ನು ತಾಳದೆ, ತಕ್ಷಣವೇ ಅವಳನ್ನು ರಾಣಿವಾಸಕ್ಕೆ ಕರೆದೊಯ್ಯುವಂತೆ ಸೇವಕರಿಗೆ ಆಜ್ಞೆ ಮಾಡಿದನು. ಆಗ ಕಾಳರಾತ್ರಿಯು - "ದಾನವೇಂದ್ರ, ನಮ್ಮ ದೇವಿಯು ನನಗಿಂತಲೂ ಸೌಂದರ್ಯವತಿ. ಅವಳನ್ನು ಗೆದ್ದರೆ, ಅವಳೂ ಅವಳೊಂದಿಗೆ ಸಾವಿರಾರು ಜನ ನನಗಿಂತಲೂ ಸುಂದರವಾಗಿರುವ ಯುವತಿಯರೂ ನಿನ್ನ ಅಧೀನರಾಗುತ್ತಾರೆ ನನ್ನೊಬ್ಬಳಿಂದ ನಿನಗೆ ಪ್ರಯೋಜನವಿಲ್ಲ" ಎಂದಳು ಅವನು ಕಾಮಾಂಧನಾಗಿದ್ದದ್ದರಿಂದ ಅವಳ ಮಾತುಗಳನ್ನು ಲಕ್ಷಿಸಲೇ ಇಲ್ಲ. ತಕ್ಷಣವೇ ಕಾಳರಾತ್ರಿಯು ಹುಂಕಾರ ಮಾಡಿ, ಸೇವಕರನ್ನೆಲ್ಲ ಭಸ್ಮಮಾಡಿದಳು. ಇದರಿಂದ ಕೋಪಗೊಂಡ ದುರ್ಗಮನು, ಮಹಾ ಸೈನ್ಯದೊಂದಿಗೆ ಶ್ರೀ ದೇವಿಯೊಂದಿಗೆ ಯುದ್ಧ ಮಾಡಲು ಬಂದನು ಮೊದ ಮೊದಲು ಜಂಭ, ಮಹಾಜಂಭ ಮುಂತಾದ ಸೇನಾನಾಯಕರಿಗೂ ಶ್ರೀ ದೇವಿಗೂ ಯುದ್ಧವಾಗಿ ಅವರೆಲ್ಲರೂ ಹತರಾದರು. ಆ ಮೇಲೆ ದುರ್ಗಮನು ಮಾಯಾ ಯುದ್ಧವನ್ನು ಮಾಡಿದನು. ಶ್ರೀ ದೇವಿಯು ತನ್ನ ಮಾಯಾಶಕ್ತಿಯಿಂದ ಅವರನ್ನೆಲ್ಲ ನಿಗ್ರಹಿಸಿದಳು. ಕೊನೆಗೆ ದುರ್ಗಮನು ಅವಳ ಮೇಲೆ ಕೋಪೋನ್ಮತ್ತನಾಗಿ ಮೇಲೇರಿ ಬಂದನು. ಆಗ ಅವಳು ತನ್ನ ಎಡಕಾಲಿನಿಂದ ಅವನ ವಕ್ಷಸ್ಥಳವನ್ನು ಒದ್ದಳು. ಆ ಒದೆತವನ್ನು ತಾಳಲಾರದೆ, ದುರ್ಗಮನು ನೆಲದ ಮೇಲೆ ಬಿದ್ದು, ಪ್ರಾಣ ಬಿಟ್ಟನು ಇದನ್ನು ಕಂಡ ದೇವತೆಗಳು ಸಂತೋಷಗೊಂಡರು ದುರ್ಗಮನ ಸಾವಿನಿಂದ ಜಗತ್ತು

ನೆಮ್ಮದಿಯನ್ನು ಪಡೆಯಿತು. ಯಜ್ಞಯಾಗಾದಿಗಳು ಪುನಃ ಪ್ರಾರಂಭಗೊಂಡವು. ಶಿಷ್ಟರ ರಕ್ಷಣೆಯಾಯಿತು. ಧರ್ಮದ ಸಂಸ್ಥಾಪನೆಯಾಯಿತು

ಪರಾಶಕ್ತಿಯ ಐದನೆಯ ಅವತಾರವನ್ನು ಶ್ರೀ ಲಲಿತಾ ಎಂದು ಸಂಕೇತಿಸಲಾಗಿದೆ. ಶ್ರೀ ಲಲಿತೆಯನ್ನು ರಾಜರಾಜೇಶ್ವರಿ, ತ್ರಿಪುರ ಸುಂದರಿ ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಇವಳು ದೇವತೆಗಳ ಚಿದಗ್ನಿಕುಂಡದಿಂದ ಉದ್ಭವಿಸಿದ ತೇಜೋರೂಪಿಣಿಯಾಗಿದ್ದಾಳೆ.

ಹಿಮವತ್ ಪರ್ವತ ಪ್ರದೇಶ. ಶಿವನ ಮನಸ್ಸನ್ನು ಚಂಚಲಗೊಳಿಸಲು ಬಂದ ಮನ್ಮಥನು, ಶಿವನ ತೃತೀಯ ನೇತ್ರಾಗ್ನಿಗೆ ಆಹುತಿಯಾಗಿ ಭಸ್ಮೀಭೂತನಾದನು ಆ ಭಸ್ಮವನ್ನು ಚಿತ್ರಕರ್ಮ ಎಂಬ ಗಣೇಶ್ವರನು ಒಟ್ಟುಗೂಡಿಸಿ, ಒಂದು ಮಾನವಾಕೃತಿಯನ್ನು ಮಾಡಿದನು. ಶಿವನ ದೃಷ್ಟಿ ಈ ಆಕೃತಿಯ ಮೇಲೆ ಬಿದ್ದು, ಅದಕ್ಕೆ ಜೀವ ಬಂದಿತು. ಇದನ್ನು ಕಂಡು ಚಿತ್ರ ಕರ್ಮನಿಗೆ ಸಂತೋಷವಾಗಿ ಆ ಆಕೃತಿಗೆ ಶತರುದ್ರೀಯ ಮಂತ್ರವನ್ನು ಉಪದೇಶಿಸಿ, ಇದರ ಪುನಶ್ಚರಣೆಯಿಂದ ಶಿವನನ್ನು ಒಲಿಸಿಕೊಳ್ಳುವಂತೆ ಹೇಳಿದನು. ಆ ಆಕೃತಿಯು ಹಾಗೆಯೇ ಮಾಡಿ ಶಿವನನ್ನು ಮೆಚ್ಚಿಸಿ ವರವನ್ನು ಪಡೆಯಿತು ಇದನ್ನು ಕಂಡ ಬ್ರಹ್ಮನು "ಭಂಡ್" "ಭಂಡ್" ಎಂದು ಹರ್ಷೋದ್ಗಾರ ಮಾಡಿದನು. ಹಾಗಾಗಿ ಆ ಆಕೃತಿಗೆ "ಭಂಡ" ಎಂಬ ಹೆಸರು ರೂಢಿಗೆ ಬಂದಿತು ಶಿವನ ಕೋಪಾಗ್ನಿಯ ಭಸ್ಮದಿಂದ ಜೀವ ಪಡೆದದ್ದರಿಂದ ಭಂಡನಲ್ಲಿ ದಾನವ ಸ್ವಭಾವ ಬಂದು, ಅವನು ಭಂಡಾಸುರ ಎಂದು ಪ್ರಸಿದ್ಧನಾದನು ಇದನ್ನರಿತ ಶುಕ್ರಾಚಾರ್ಯರು ಭಂಡಾಸುರನನ್ನು ದಾನವರ ಅಧಿಪತಿಯನ್ನಾಗಿ ಮಾಡಿದರು ದಾನವ ಶಿಲ್ಪಿಯಾದ ಮಾಯಾಸುರನು ಶೋಣಿತಪುರ ಎಂಬ ಹೊಸನಗರವನ್ನು ಭಂಡಾಸುರನಿಗಾಗಿ ಕಟ್ಟಿದನು. ಭಂಡಾಸುರನು ಶೋಣಿತಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು, ದಾನವ ರಾಜ್ಯವನ್ನು ಆಳಿದನು. ಅವನು ಸಂಮೋಹಿನಿ, ಕುಮುದಿನಿ, ಚಿತ್ರಾಂಗಿ, ಸುಂದರಿ ಎಂಬುವರನ್ನು ವಿವಾಹವಾಗಿ ಮೂವತ್ತು ಜನ ಮಕ್ಕಳನ್ನು ಪಡೆದನು ಭಂಡಾಸುರನು ದಾನವನಾದ್ದರಿಂದ, ದೇವತೆಗಳಿಗೆ ಇವನ ಬಗ್ಗೆ ಭಯ ಇದ್ದೇ ಇತ್ತು. ದೇವತೆಗಳು ತಮ್ಮ ಆತಂಕವನ್ನು ಬ್ರಹ್ಮ



ಶಿವರೊಂದಿಗೆ ಬಂದು, ವಿಷ್ಣುವಿಗೆ ತಿಳಿಸಿದರು ವಿಷ್ಣುವು ಅವರಿಗೆ ಅಭಯ ಪ್ರದಾನ ಮಾಡಿದನು. ಭಂಡಾಸುರನಿಗೆ ವರದ ರೂಪದಲ್ಲಿ ಬಂದ ಅರವತ್ತು ಸಾವಿರ ವರ್ಷಗಳ ಆಳ್ವಿಕೆಯ ಅಧಿಕಾರ ಕಳೆಯುತ್ತಾ ಬಂದಿತು

ಇದನ್ನೇ ಕಾಯುತ್ತಿದ್ದ ವಿಷ್ಣುವು ಒಬ್ಬ ಮಾಯಾ ಸುಂದರಿಯನ್ನು ಸೃಷ್ಟಿಸಿ, ಅವಳ ಸಹಾಯಕ್ಕೆ ವಿಶ್ವಾಚಿ ಮುಂತಾದ ಅಪ್ಸರೆಯನ್ನು ಕೊಟ್ಟು, ಭಂಡಾಸುರನನ್ನು ಮೋಹಗೊಳಿಸುವಂತೆ ಕಳಿಸಿದನು. ಆ ಮೋಹಿನಿಯು ಸಹಾಯಕರೊಂದಿಗೆ ಬಂದು ಭಂಡಾಸುರನ ವಿಹಾರವನದಲ್ಲಿ ಒಂದು ಸಂಪಿಗೆ ಮರದ ಬಳಿ ಬಿಡಾರ ಹೂಡಿ, ಇಂಪಾದ ಧ್ವನಿಯಿಂದ ಹಾಡಲು ಪ್ರಾರಂಭಿಸಿದಳು. ತನ್ನ ಮಂತ್ರಿಗಳೊಂದಿಗೆ ವಿಹಾರಾರ್ಥವಾಗಿ ಬಂದ ಭಂಡಾಸುರನು ಮೋಹಿನಿಯ ರೂಪಲಾವಣ್ಯಕ್ಕೆ ಮರುಳಾದನು. ಮಂತ್ರಿಗಳು

ವಿಶ್ವಾಚಿ ಮುಂತಾದ ಅಪ್ಸರೆಯರ ರೂಪಕ್ಕೆ ಮರುಳಾದರು ಭಂಡಾಸುರನು ಮೋಹಿನಿಯನ್ನೂ, ಮಂತ್ರಿಗಳು ಅಪ್ಸರೆಯರನ್ನೂ ತಮ್ಮ ತಮ್ಮ ಮನೆಗಳಿಗೆ ಕರೆದುಕೊಂಡು ಬಂದು ಭೋಗವಿಲಾಸದಲ್ಲಿ ಮುಳುಗಿದರು ಇದರ ಪರಿಣಾಮವಾಗಿ ಭಂಡಾಸುರನ ರಾಜ್ಯದಲ್ಲಿ ನಡೆಯುತ್ತಿದ್ದ ವೇದ

ಪಾರಾಯಣಗಳೂ, ಯಜ್ಞಯಾಗಗಳೂ ನಿಂತು, ಭಂಡಾಸುರನಿಗೆ ದೈವೀ ಬಲವು ಕುಗ್ಗುತ್ತಾ ಬಂದಿತು.

ಇದನ್ನರಿತ ನಾರದರು ದೇವಲೋಕಕ್ಕೆ ಬಂದು, ದೇವೇಂದ್ರನಿಗೆ, ಪರಾಶಕ್ತಿಯನ್ನು ತಪಸ್ಸಿನಿಂದ ಒಲಿಸಿಕೊಂಡು, ಅವಳ ಮೂಲಕ ಭಂಡಾಸುರನನ್ನು ನಾಶಗೊಳಿಸುವಂತೆ ಹೇಳಿದರು ದೇವೇಂದ್ರನು ಇತರ ದೇವತೆಗಳೊಂದಿಗೆ, ಭಾಗೀರಥಿ ನದೀ ತೀರಕ್ಕೆ ಬಂದು, ಶ್ರೀ ದೇವಿಯನ್ನು ಕುರಿತು ತಪಸ್ಸು ಮಾಡಿದನು ದೇವತೆಗಳ ಮನಸ್ಸೆಂಬ ಯಜ್ಞ ಕುಂಡದಿಂದ ದಿವ್ಯಶಕ್ತಿಯೊಂದು ಸ್ತ್ರೀ ರೂಪದಲ್ಲಿ ಉದಿಸಿ ಬಂದಿತು ಬ್ರಹ್ಮಾದಿ ದೇವತೆಗಳೆಲ್ಲರೂ ಈ ದೇವಿಯನ್ನು ಸ್ತುತಿಸಿ, ಭಂಡಾಸುರನನ್ನು ವಧಿಸಬೇಕೆಂದು ಪ್ರಾರ್ಥಿಸಿದರು ಶ್ರೀ ದೇವಿಯು ಪ್ರಸನ್ನಳಾಗಿ, ಅವರ ಪ್ರಾರ್ಥನೆಯಂತೆ ದಾನವನನ್ನು ಸಂಹರಿಸುವುದಾಗಿ ಹೇಳಿದಳು ದೇವಶಿಲ್ಪಿಯಾದ ವಿಶ್ವಕರ್ಮನು ಶ್ರೀನಗರ ಎಂಬ ಹೊಸನಗರವೊಂದನ್ನು ಶ್ರೀ ದೇವಿಗಾಗಿ ಕಟ್ಟಿದನು ಶ್ರೀ ದೇವಿಯು ತನ್ನ ಪರಿವಾರದೊಂದಿಗೆ ಅಲ್ಲಿ ನೆಲೆಸಲು ಸಮ್ಮತಿಸಿದಳು ಕೇವಲ ಸ್ತ್ರೀಯಾಗಲೀ, ಪುರುಷನಾಗಲೀ ಸಿಂಹಾಸನವನ್ನು ಹತ್ತಿ ರಾಜ್ಯಭಾರ ಮಾಡುವುದು ವಿಹಿತವಲ್ಲ ಎಂಬುದನ್ನು ಅರಿತ ಬ್ರಹ್ಮನು, ಶ್ರೀ ದೇವಿಯನ್ನು ಪತ್ನಿಯನ್ನಾಗಿ ಸ್ವೀಕರಿಸುವಂತೆ ಶಂಕರನನ್ನು ಪ್ರಾರ್ಥಿಸಿದನು ಇದನ್ನು ಒಪ್ಪಿದ ಶಂಕರನು ಸುಂದರ ರೂಪ ತಾಳಿ ನಿಂತನು. ಇವನನ್ನು ಕಾಮೇಶ್ವರ ಎಂದೂ ಶ್ರೀ ದೇವಿಯನ್ನು ಕಾಮೇಶ್ವರಿ ಎಂದು ಬ್ರಹ್ಮಾದಿಗಳು ಕರೆದು, ಅವರಿಬ್ಬರಿಗೂ ವಿವಾಹ ಮಾಡಿದರು ಅನಂತರ ಅವರಿಬ್ಬರನ್ನೂ ಶ್ರೀನಗರದ ಅರಮನೆಯಲ್ಲಿದ್ದ ಸಿಂಹಾಸನದ ಮೇಲೆ ಕುಳ್ಳಿರಿಸಿ, ರಾಜ್ಯಾಭಿಷೇಕ ಮಾಡಿದರು

ಸೂಕ್ತ ಸಮಯವನ್ನು ನೋಡಿ ಶ್ರೀ ದೇವಿಯು ಭಂಡಾಸುರನ ಮೇಲೆ ಯುದ್ಧಕ್ಕೆ ಹೊರಟಳು. ಶ್ರೀ ದೇವಿಯ ಅಂಕುಶದಿಂದ ಉದಿಸಿ ಬಂದ ಸಂಪತ್ಕರೀ ದೇವಿಯು ಗಜ ಸೈನ್ಯದ ಸೇನಾನಾಯಕಿಯಾದಳು ಪಾಶದಿಂದ ಉದಿಸಿದ ಅಶ್ವಾರೂಢಾ ದೇವಿಯು ಅಶ್ವಸೈನ್ಯದ ಸೇನಾಪತಿಯಾದಳು ಶ್ರೀ ದೇವಿಯ ಶಕ್ತಿ ಸ್ವರೂಪಿಣಿಯಾದ ದಂಡನಾಥಾ ದೇವಿಯು ವರಾಹಮುಖ ಸೇನೆಯ ಸೇನಾಪತಿಯಾದಳು ಇವರೊಂದಿಗೆ



**ಮಂತ್ರಿನಾಥಾ ಎಂಬ ಹೆಸರಿನ ಶಕ್ತಿ ದೇವತೆಯು** ಗೇಯ ಚಕ್ರ ಎಂದು ಕರೆಯಲ್ಪಡುವ ಸಂಗೀತ ಯೋಗಿನಿಯರಿದ್ದ ಸೇನೆಯ ಸೇನಾನಾಯಕಿಯಾದಳು ಶ್ರೀ ದೇವಿಯು ತನ್ನ ಸೈನ್ಯವನ್ನು ಒಂಬತ್ತು ಪರ್ವಗಳಾಗಿ ರಚಿಸಿ ಮುನ್ನಡೆಸಿದಳು. ಶತ್ರುಗಳು ಒಳ ಬರದಂತೆ ರಕ್ಷಣೆಗೆ ಹೊರ ಆವರಣದಲ್ಲಿ ಜ್ವಾಲಾಮಾಲಿನಿ ಎಂಬ ಶಕ್ತಿ ದೇವತೆಯ ನಾಯಕತ್ವದಲ್ಲಿ ಜ್ವಾಲಾಮುಖಿ ಸೈನ್ಯವು ಸಿದ್ಧವಾಗಿ ಶ್ರೀ ದೇವಿಯ ಸೈನ್ಯವನ್ನು ರಕ್ಷಿಸತೊಡಗಿತು.

ಪ್ರಾರಂಭದಲ್ಲಿ ಶ್ರೀ ದೇವಿಯ ಸೈನ್ಯವನ್ನು ಭಂಡಾಸುರನ ಸೇನಾನಾಯಕರಾದ ಕುಟಿಲಾಕ್ಷ ಮತ್ತು ದುರ್ಮದ ಎಂಬುವರು ಎದುರಿಸಿದರು ದುರ್ಮದನನ್ನು ಸಂಸತ್ಕರೀ ದೇವಿಯು ಸಂಹರಿಸಿದಳು ದುರ್ಮದನ ಸಂಹಾರವನ್ನು ಕಂಡ ಕುಟಿಲಾಕ್ಷನು ಹೆದರಿ ರಣರಂಗದಿಂದ ಓಡಿ ಹೋಗಿ, ಭಂಡಾಸುರನಿಗೆ ವಿಷಯ ತಿಳಿಸಿದನು ಆ ಮೇಲೆ ಕುರುಂಡ ಎಂಬುವನ ನಾಯಕತ್ವದಲ್ಲಿ ದಾನವ ಸೈನ್ಯವು ಬಂದಿತು ಕುರುಂಡನನ್ನು ಅಶ್ವಾರೂಢಾ ದೇವಿಯು ಸಂಹರ ಮಾಡಿದಳು. ಅನಂತರ ಕರಂಕ - ಮುಂತಾದವರು ತಮ್ಮ ತಮ್ಮ ಸೈನ್ಯದೊಂದಿಗೆ ಆರ್ಭಟಿಸುತ್ತಾ ಶ್ರೀ ದೇವಿಯ ಸೈನ್ಯದ ಮೇಲೆ ಎರಗಿ ಬಂದರು. ನಕುಲೇಶ್ವರಿ ಎಂಬ ಶಕ್ತಿ ದೇವತೆಯು ಕರಂಕನನ್ನು ಕೊಂದು ಅವನ ಸೈನ್ಯವನ್ನು ನಾಶಮಾಡಿದಳು ಆ ಮೇಲೆ ಭಂಡಾಸುರನ ಮೂವತ್ತು ಜನ ಮಕ್ಕಳು ಸೈನ್ಯದೊಂದಿಗೆ ಯುದ್ಧಕ್ಕೆ ಬಂದರು. ಇವರೆಲ್ಲರನ್ನೂ, ಶ್ರೀ ದೇವಿಯು ಆಪ್ತಳಾದ ಬಾಲಾದೇವಿಯು ಸಂಹರಿಸಿದಳು ಆ ಮೇಲೆ ಭಂಡಾಸುರನ ಸಹೋದರರಾದ ವಿಶುಕ್ರ ಮತ್ತು ವಿಷಂಗ ಎಂಬುವರು ತಮ್ಮ ಸೈನ್ಯದೊಂದಿಗೆ ಯುದ್ಧಕ್ಕೆ ಬಂದು, ಮಾಯಾಯುದ್ಧವನ್ನು ಮಾಡಿದರು. ಇವರ ಮಾಯಾರೂಪಗಳನ್ನೆಲ್ಲ ಶ್ರೀ ದೇವಿಯು ಗಣನಾಯಕರನ್ನು ಸೃಷ್ಟಿಸಿ ನಾಶಮಾಡಿದಳು ಈ ಯುದ್ಧದಲ್ಲಿ ಮಂತ್ರಿಣೀ ದೇವಿಯು ವಿಶುಕ್ರನನ್ನೂ, ದಂಡನಾಥಾ ದೇವಿಯು ವಿಷಂಗನನ್ನೂ ಸಂಹರಿಸಿದರು. ಕೊನೆಗೆ ಭಂಡಾಸುರನೇ ಯುದ್ಧರಂಗಕ್ಕೆ ಬಂದು ಮಾಯಾ ಯುದ್ಧವನ್ನು ಪ್ರಾರಂಭಿಸಿದನು ಅವನ ಮಾಯಾರೂಪಗಳನ್ನೆಲ್ಲ ಶ್ರೀ ದೇವಿಯು ತನ್ನ ದಶಾವತಾರ ರೂಪಗಳಿಂದ ವಿಫಲಗೊಳಿಸಿದಳು ತನ್ನ ಉಪಾಯಗಳೆಲ್ಲ ವಿಫಲವಾಗಲು ಭಂಡಾಸುರನು ನಿಜರೂಪದಲ್ಲಿ ಯುದ್ಧ ಮಾಡುತ್ತಾ ಅನೇಕ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿದನು ಶ್ರೀ ದೇವಿಯು ಪಾಶುಪತಾಸ್ತ್ರದಿಂದ ಅವನ್ನೆಲ್ಲ ನಾಶಮಾಡಿ, ಕೊನೆಗೆ ನಾರಾಯಣಾಸ್ತ್ರವನ್ನು ಪ್ರಯೋಗಿಸಿ, ಶೂನ್ಯಕಾನಗರ ಸಹಿತವಾಗಿ ಭಂಡಾಸುರನನ್ನು ನಾಶಗೊಳಿಸಿದಳು.

ಭಂಡಾಸುರನ ನಾಶವನ್ನು ತಿಳಿದು ದೇವತೆಗಳೂ, ಋಷಿಮುನಿಗಳೂ ಸಂತೋಷಪಟ್ಟರು ಜಗತ್ತು ನೆಮ್ಮದಿಯನ್ನು ಪಡೆದು ಶ್ರೀ ದೇವಿಯನ್ನು ಮನಸಾರೆ ಸ್ತುತಿಸಿತು. ಅನಂತರ ಶ್ರೀ ದೇವಿಯು ತನ್ನ ಪರಿವಾರ ಸಮೇತ ಶ್ರೀನಗರಕ್ಕೆ ಬಂದು ವಾಸ ಮಾಡಿದಳು ಬ್ರಹ್ಮಾದಿಗಳ ಪ್ರಾರ್ಥನೆಯಂತೆ ಶ್ರೀ ದೇವಿಯು ಮನ್ಮಥನನ್ನು ಬದುಕಿಸಿದಳು ಅನಂತರ ರತಿ ಮನ್ಮಥರು ಮತ್ತೆ ದಂಪತಿಗಳಾಗಿ ಸೇರಿ ಆನಂದಿಸಿದರು. ಶ್ರೀ ದೇವಿಯ ಆಜ್ಞೆಯಂತೆ ಮನ್ಮಥನು ಶಿವ ಮತ್ತು ಪಾರ್ವತಿಯರ ಮನಸ್ಸನ್ನು ಚಂಚಲಗೊಳಿಸಿ, ಅವರಿಬ್ಬರೂ ಪರಸ್ಪರ ಅನುರಾಗಗೊಂಡು ವಿವಾಹವಾಗುವಂತೆ ಮಾಡಿದನು ಇದರ ಪರಿಣಾಮವಾಗಿ ಸ್ಕಂದನು ಹುಟ್ಟಿ, ಅವರು ದೇವತೆಗಳ ಸೇನೆಯೊಂದಿಗೆ ಹೋಗಿ ತಾರಕಾಸುರನನ್ನು ಸಂಹರಿಸಿದನು. ಇದರಿಂದ ಸಂತೋಷಗೊಂಡ ದೇವೇಂದ್ರನು ತನ್ನ ಮಗಳಾದ ದೇವಸೇನೆಯನ್ನು ಸ್ಕಂದನಿಗೆ ಕೊಟ್ಟು ವಿವಾಹ ಮಾಡಿದನು. ಇದರಿಂದ ಮೂರು ಲೋಕಗಳೂ ಸಂತೋಷಗೊಂಡವು

ದುಷ್ಟ ಶಿಕ್ಷಕಿಯೂ, ಶಿಷ್ಟರಕ್ಷಕಿಯೂ, ಧರ್ಮಸ್ಥಾಪಕಿಯೂ, ಪಂಚಾವತಾರ ಸ್ವರೂಪಿಣಿಯೂ ಆದ ಪರಾಶಕ್ತಿಯು ಸನ್ಮಂಗಳಗಳನ್ನುಂಟುಮಾಡಲಿ.

☆ ☆ ☆

# ಧರ್ಮ

- ಡಾ || ಎಚ್. ವಿ. ನರಸಿಂಹಮೂರ್ತಿ.

'ಧರ್ಮ' ಬದುಕಿನ ಎಲ್ಲ ಮೌಲ್ಯಗಳಲ್ಲಿ ಅಗ್ರ ಮಾನ್ಯವಾದ ಮೌಲ್ಯ ಧರ್ಮದ ಆಚರಣೆಯೇ ಉತ್ತಮ ನಾಗರಿಕರ ಲಕ್ಷಣ ಧರ್ಮವೇ ಮನುಷ್ಯನ ವಿಶೇಷತೆ. ಧರ್ಮ ಬಿಟ್ಟ ಮನುಷ್ಯ ಮನುಷ್ಯನೇ ಅಲ್ಲ. ಅವನು ಪಶುಗಳಿಗೆ ಸಮಾನ ಆಹಾರ, ನಿದ್ರೆ, ಭಯ, ಮೈಥುನಗಳು ಪಶುಗಳಿಗೂ, ಮನುಷ್ಯನಿಗೂ ಇರುವ ಸಾಮಾನ್ಯವಾಗಿರುವ ಗುಣಗಳು. ಆದುದರಿಂದ ಯಾವ ಮನುಷ್ಯರ ವ್ಯವಹಾರಗಳೆಲ್ಲ ಇಷ್ಟರೊಳಗೆಯೇ ಕೇಂದ್ರೀಕೃತವಾಗಿರುತ್ತವೆಯೋ, ಅವರಿಗೂ ಪಶುಗಳಿಗೂ ಏನೂ ಅಂತರವಿಲ್ಲ ಆದರೆ ಯಾವ ಮನುಷ್ಯರ ಜೀವನದಲ್ಲಿ ಧರ್ಮಪಾಲನೆಯು ಕಂಡುಬರುತ್ತದೋ, ಆ ಮನುಷ್ಯರೇ ಪಶುಗಳಿಗಿಂತ ಶ್ರೇಷ್ಠರಾಗಿರುತ್ತಾರೆ. ಈ ಕೆಳಗಿನ ಶ್ಲೋಕ ಇದನ್ನೇ ತಿಳಿಸುತ್ತದೆ :

ಆಹಾರ ನಿದ್ರಾ ಭಯ ಮೈಥುನಂ ಚ
ಸಾಮಾನ್ಯ ಮೇತತ್ಪಶುಭಿರ್ನರಾಣಾಮ್
ಧರ್ಮೋ ಹಿ ತೇಷಾಮಧಿಕೋ ವಿಶೇಷಃ
ಧರ್ಮೇಣ ಹೀನಾಃ ಪಶುಭಿಸ್ಸಮಾನಾಃ

'ಧರ್ಮ' ಎಂದರೆ ವೈದಿಕ ನಿಯಮಗಳು ಈ ನಿಯಮಗಳು ಮಾನವ ಸಮಾಜವನ್ನು ಧಾರಣೆ ಮಾಡುತ್ತವೆ ಆದ್ದರಿಂದ ಇವು ಮಾನವೀಯ ನಿಯಮಗಳು ಈ ನಿಯಮಗಳು ಮುಖ್ಯವಾಗಿ ಶ್ರುತ್ಯುಕ್ತ ಮತ್ತು ಸ್ಮೃತ್ಯುಕ್ತ ಎಂದು ಎರಡು ವಿಧವಾಗಿವೆ. ಸ್ಮೃತ್ಯುಕ್ತ ಧರ್ಮವು ವರ್ಣ ಧರ್ಮ, ಆಶ್ರಮಧರ್ಮ, ನಿಮಿತ್ತ ಧರ್ಮ, ಪ್ರಾಯಶ್ಚಿತ್ತ ಧರ್ಮ, ಆಪದ್ಧರ್ಮ ಮತ್ತು ಸಾಧಾರಣಧರ್ಮವೆಂದು ಆರು ವಿಧವಾಗಿದೆ. ಶ್ರುತ್ಯುಕ್ತ ಧರ್ಮದಲ್ಲಿ ಈ ಎಲ್ಲ ಧರ್ಮಗಳೂ ಬೀಜರೂಪದಲ್ಲಿ ನೆಲೆಗೊಂಡಿವೆ

ಮನುಸ್ಮೃತಿಯಲ್ಲಿ ಸಾಧಾರಣಧರ್ಮದ ಹತ್ತು ಲಕ್ಷಣಗಳನ್ನು ಹೀಗೆ ಹೇಳಲಾಗಿದೆ :

ಧೃತಿಃ ಕ್ಷಮಾ ದಮೋಽಸ್ತೇಯಂ
ಶೌಚಮಿಂದ್ರಿಯ ನಿಗ್ರಹಃ
ಧೀರ್ವಿದ್ಯಾಸತ್ಯಮಕ್ರೋಧೋ
ದಶಕಂ ಧರ್ಮ ಲಕ್ಷಣಮ್

ಅವುಗಳನ್ನು ಹೀಗೆಂದು ವಿವರಿಸಬಹುದು :

೧) ಧೃತಿ (ಧೈರ್ಯ) · ಯಾವ ಕಾರ್ಯವನ್ನು ಮಾಡಲಿಕ್ಕೆ ಭಯಪಡಬೇಕು ಮತ್ತು ಯಾವ ಕಾರ್ಯಕ್ಕೆ ಭಯಪಡಬಾರದು ಎಂಬುದರ ಬಗ್ಗೆ ಧೃಡವಿಚಾರ ೨) ಕ್ಷಮಾ : ಸಹನಶೀಲತೆ ೩) ದಮ : ಮನಸ್ಸಿನ ಮೇಲೆ ವಿವೇಕದ ಅಂಕುಶ. ೪) ಅಸ್ತೇಯ · ಅಧರ್ಮ ಮಾರ್ಗದಿಂದ ಬರುವ ಸಂಪತ್ತಿನಿಂದ ದೂರ ಇರುವುದು ೫) ಶೌಚ · ಶರೀರ, ಮನಸ್ಸು ಮತ್ತು ಮಾತಿನ ಶುದ್ಧತೆ. ೬) ಇಂದ್ರಿಯ ನಿಗ್ರಹ ಆತ್ಮೋನ್ನತಿಯ ಮಾರ್ಗದಲ್ಲಿ ಬಾಧಕವಾಗಿ ಬರುವ ಶಬ್ದ, ರೂಪ, ರಸ, ಸ್ಪರ್ಶ ಮತ್ತು ಗಂಧ ಈ ಐದು ವಿಷಯಗಳ ಭೋಗದಲ್ಲಿ ಮುಳುಗದಿರುವುದು. ೭) ಧೀಃ · ಮೇಧಾಶಕ್ತಿ. ೮) ವಿದ್ಯಾ : ಸೃಷ್ಟಿಯ ಸಕಲ ಪದಾರ್ಥಗಳ ಯಥಾರ್ಥಜ್ಞಾನ. ೯) ಸತ್ಯ : ಸತ್ಯದ ರಕ್ಷಣೆ ೧೦) ಅಕ್ರೋಧ : ಮಾನಸಿಕ ಸಂತುಲನೆಯನ್ನು ಕಳೆದುಕೊಂಡು ಹಿಂಸೆಗೆ ಇಳಿಯದಿರುವುದು - ಇವು ಸಾಧಾರಣ ಧರ್ಮದ ಹತ್ತು ಲಕ್ಷಣಗಳು

ಧರ್ಮವೆಂದರೆ ಇಲ್ಲಿ ವೈದಿಕ ತತ್ವಗಳು ಎಂದು ಸಿದ್ಧವಾಗುತ್ತದೆ. ಧರ್ಮದ ಈ ಹತ್ತು ತತ್ವಗಳೇ ಮಾನವ ಸಮಾಜದಲ್ಲಿ ಏಕತೆ, ಸಮರಸತೆ ಮತ್ತು ಉದ್ಗತಿಗೆ ಆಧಾರವಾಗಿವೆ ಪ್ರತಿಯೊಬ್ಬ ನಾಗರಿಕನೂ ಕೂಡ ಇವುಗಳನ್ನು ಪೂರ್ಣ ನಿಷ್ಠೆಯಿಂದ ಪಾಲನೆ ಮಾಡಿದರೆ ಸಮಾಜದಲ್ಲಿ ಒಂದು ಉತ್ತಮ ಧಾರ್ಮಿಕ ಪರಂಪರೆಯು ಸ್ಥಾಪನೆಯಾಗುತ್ತದೆ. ಈ ಪರಂಪರೆಯೇ ಸಮಾಜದ ಉನ್ನತಿಯ ಆಧಾರ. ಇವುಗಳನ್ನೇ ಈಗ ಮೂಲಭೂತ ಮೌಲ್ಯಗಳು ಎಂದು ಹೇಳುವುದು. ಪಶುಗಳಿಗೆ ಈ ಮೌಲ್ಯಗಳ ಪಾಲನೆ ಮಾಡಲಿಕ್ಕೆ ಆಗುವುದಿಲ್ಲ. ಪಶುಗಳು ಎಲ್ಲಿ ಒಟ್ಟುಸೇರಿಕೊಂಡು ಇರುತ್ತವೆಯೋ ಅದನ್ನು ಸಜ ಎಂದು ಕರೆಯುತ್ತಾರೆ. (ಸಮಂಜಂತಿ ಪಶುವೋಯತ್ರ ತತ್). ಧರ್ಮ ಮರ್ಯಾದೆಗಳು ಇಲ್ಲದ ಜನರ ಸಮುದಾಯವನ್ನು 'ಸಮಜ' ಎಂದು ಕರೆಯಬಹುದೇ ಹೊರತು ಅದನ್ನು 'ಸಮಾಜ' (ಸಮಾಜೋಽಧಸ ಧರ್ಮಿಣಾಮ್) ಎಂದು ಕರೆಯುವುದು ಸಮರ್ಪಕವಾಗುವುದಿಲ್ಲ ಮಾನವಕುಲಕ್ಕೆ ಧರ್ಮದ ರಕ್ಷಣೆಯಿಂದ 'ಸಮಾಜ'ವೆಂಬ ಪ್ರತಿಷ್ಠಿತ ಹೆಸರು ಸಿಕ್ಕಿದೆ

ಮಹರ್ಷಿ ಮನು ಯಾವುದನ್ನು ಸಾಧಾರಣ ಧರ್ಮವೆಂದು ಕರೆದಿದ್ದಾನೋ, ಮಹಾತ್ಮಾ ಪ್ಲೇಟೋ ಅದನ್ನು ಸದಾಚಾರ ಎಂದು ಕರೆದಿದ್ದಾನೆ ಉತ್ತಮ ಮೇಧಾಶಕ್ತಿ, ಧೈರ್ಯ, ಇಂದ್ರಿಯನಿಗ್ರಹ, ಮತ್ತು ನ್ಯಾಯ - ಇವೇ ಅವನು ಹೇಳಿರುವ ಸದಾಚಾರದ ನಾಲ್ಕು ಮುಖ್ಯ ಲಕ್ಷಣಗಳು. ಯೂರೋಪಿನ ನಾಗರಿಕತೆಯ ಮೂಲಭೂತ ಮೌಲ್ಯಗಳ ಕಲ್ಪನೆಗೆ ಪ್ಲೇಟೋವಿನ ಈ ವಿಚಾರವೇ ಆಧಾರವಾಗಿದೆ 'ಧರ್ಮ' ಕುರಿತಾದ ಮನುವಿನ ವಿಚಾರಗಳು ಇದಕ್ಕಿಂತಲೂ ಹೆಚ್ಚು ಪ್ರಾಚೀನವಾಗಿವೆ ಮತ್ತು ಹೆಚ್ಚು ವ್ಯಾಪಕವಾಗಿವೆ - ಎಂಬುದನ್ನು ನಾವಿಲ್ಲಿ ಗಮನಿಸಬೇಕು

ಜನರಲ್ಲಿ ವಿಶೇಷವಾಗಿ ಜನನಾಯಕರಲ್ಲಿ ಧರ್ಮ ಮತ್ತು ದೇವರ ಕುರಿತಾದ ಅರಿವಿಗೆ ಅಭಾವವು ಉತ್ಪನ್ನವಾದಾಗ, ಅವರಲ್ಲಿ ಲೋಭವು ಉದಿಸುತ್ತದೆ. ಈ ಲೋಭವೇ ಎಲ್ಲ ಪಾಪಗಳಿಗೂ ಮೂಲ ಇದು ಮಾನವರನ್ನು ದಸ್ಯುಗಳನ್ನಾಗಿ ಮಾಡುತ್ತದೆ. ತಮ್ಮ ಸ್ವಾರ್ಥಕ್ಕಾಗಿ ಇವರು ರಾಜ್ಯದ ಮೇಲೆ ತಮ್ಮ ಅಧಿಕಾರವನ್ನು ಸ್ಥಾಪಿಸುವುದಕ್ಕೋಸ್ಕರ ಪರಸ್ಪರ ಯುದ್ಧ - ಕಲಹಗಳಲ್ಲಿ ಪ್ರವೃತ್ತರಾಗುತ್ತಾರೆ. ಇದರಿಂದ ಧಾರ್ಮಿಕ ಮತ್ತು ನೈತಿಕ ಅಧಃಪತನವುಂಟಾಗಿ ಮಾನವ ಸಮಾಜಕ್ಕೆ ಅಪಾರ ಹಾನಿಯಾಗುತ್ತದೆ

ಈ ಧಾರ್ಮಿಕ ಮತ್ತು ನೈತಿಕ ಅಧಃಪತನಕ್ಕೆ ಪುನಃ ಮಹರ್ಷಿ ಮನುವಿನ ವಿಚಾರವನ್ನು ಇಲ್ಲಿ ಮನನ ಮಾಡಿಕೊಳ್ಳಬೇಕು ಅನ್ಯಾಯ - ಅತ್ಯಾಚಾರ ಮೊದಲಾದ ದುಷ್ಕೃತ್ಯಗಳು ನಡೆದಾಗ ಅದರ ದೋಷವು ನಾಲ್ಕು ಸಮಾನ ಪಾಲುಗಳಾಗಿ ಅಂದರೆ ೧) ಅದನ್ನು ಮಾಡಿದವರು,

೨) ಅದನ್ನು ನೋಡಿಯೂ ಅಥವಾ ತಿಳಿದು ಕೊಂಡೂ ಕೂಡ ವಿರೋಧಿಸದಿರುವವರು, ೩) ಜನರ ಪ್ರತಿನಿಧಿಗಳಾಗಿ ಆಯ್ಕೆಗೊಂಡ ಜನನಾಯಕರು ಮತ್ತು ೪) ಸರಕಾರಕ್ಕೆ - ಸಲ್ಲುತ್ತದೆ.

ಪಾದೋ ಧರ್ಮಸ್ಯ ಕರ್ತಾರಂ
ಪಾದಃ ಸಾಕ್ಷಿಣಮೃಚ್ಛತಿ
ಪಾದಃ ಸಭಾಸದಃ ಸರ್ವಾನ್
ಪಾದೋ ರಾಜಾನ ಮೃಚ್ಛತಿ

ಒಟ್ಟು ಸಮಾಜ ಇದಕ್ಕೆ ಹೊಣೆಯಾಗಿರುತ್ತದೆ - ಎಂದು ಇದರ ಅರ್ಥ. ಈ ದೋಷದಿಂದ ತಪ್ಪಿಸಿಕೊಳ್ಳಲು ಯಾರಿಗೂ ಸಾಧ್ಯವಿಲ್ಲ.

ಆದ್ದರಿಂದ ನಾವು ಧರ್ಮಮಾರ್ಗದಲ್ಲಿ ನಡೆಯದೇಕು ಇತರರನ್ನೂ ನಡೆಯುವಂತೆ ಪ್ರೇರಿಸಬೇಕು. ಏಕೆಂದರೆ ಇಡೀ ಸಮಾಜದ ಸಂಸ್ಕೃತಿಗೆ ಧರ್ಮವೇ ಮೂಲಕಾರಣ. ಮಾನವ 'ಮಾನವ'ನಾಗುವುದು ಧರ್ಮದಿಂದ. ಧರ್ಮ ಬಿಟ್ಟ ಮಾನವನಿಗೆ ಇಹವೂ ಇಲ್ಲ; ಪರವೂ ಇಲ್ಲ, ಶ್ರೇಯಸ್ಸೂ ಇಲ್ಲ; ಪ್ರೇಯಸ್ಸೂ ಇಲ್ಲ. ಇಂತಹ ಮಾನವರು ಸತ್ವಧ ಸಮಾಜ ನಿರ್ಮಿಸಲಾರರು. ನಮ್ಮ ಪೂರ್ವಿಕರು ನಮಗಾಗಿ ನಿರ್ಮಿಸಿ ಹೋದ ಬಹುದೊಡ್ಡ ಆಸ್ತಿ 'ಧರ್ಮ'. ಬೇರಾವ ದೇಶದ ಜನತೆಗೂ ಅಲ್ಲದ ಅಪೂರ್ವ ಸಂಪತ್ತು ನಮಗಿದೆ. ನಾವು ಅದರ ವಾರಸುದಾರರು ಎಂಬುದು ನಮಗೆ ಹೆಮ್ಮೆ ತರುವ ವಿಚಾರ. ಅದನ್ನು ಉಳಿಸಿ ಬೆಳೆಸೋಣ, ದುರ್ಲಭವಾದ ಈ ಮನುಷ್ಯ ಜನ್ಮವನ್ನು ಸಾರ್ಥಕಪಡಿಸಿಕೊಂಡು, ನಮ್ಮ ಹೆಜ್ಜೆಗುರುತುಗಳನ್ನು ಸ್ಪಷ್ಟವಾಗಿ ಇಲ್ಲಿ ಮೂಡಿಸಿ ಮರಳೋಣ. 'ನ ಸ ಪುನರಾವರ್ತತೇ' ಎಂಬಂತೆ ಮರಳಿ ಬಾರದ ಪರಮಪದಕ್ಕೆ ತೆರಳಿ ಉಜ್ವಲರಾಗಿ ಬೆಳಗೋಣ.

## ಪಾಪ - ಪುಣ್ಯ

ಜಗತ್ತಿನಲ್ಲಿ ಪಾಪ - ಪುಣ್ಯಗಳ ಬಗ್ಗೆ ವಿಪುಲವಾದ ಚರ್ಚೆ - ಜಿಜ್ಞಾಸೆ ನಡೆದಿದೆ; ನಡೆಯುತ್ತಿದೆ. ಎಲ್ಲ ಮತ - ಧರ್ಮಗಳೂ ಪಾಪ - ಪುಣ್ಯಗಳ ಅರ್ಥವಿವರಣೆ ನೀಡಿ, ಪಾಪಕೃತ್ಯಗಳ ಮತ್ತು ಪುಣ್ಯ ಕಾರ್ಯಗಳ ಸುದೀರ್ಘ ಪಟ್ಟಿಯನ್ನೇ ಸಿದ್ಧಪಡಿಸಿ, ತಮ್ಮ ಅನುಯಾಯಿಗಳ ಮುಂದಿಟ್ಟಿವೆ. ಪಾಪಕ್ಕೆ ಶಿಕ್ಷೆ - ಪುಣ್ಯಕ್ಕೆ ರಕ್ಷೆ, ಪಾಪಿಗಳಿಗೆ ನರಕ - ಪುಣ್ಯವಂತರಿಗೆ ಸ್ವರ್ಗ - ಇದು ಎಲ್ಲ ಪ್ರಮುಖ ಮತ - ಧರ್ಮಗಳ ಸಾಮಾನ್ಯ ಬೋಧೆ. ಆದರೆ ಸ್ವರ್ಗಕ್ಕೆ ಹೋಗಿ ಬಂದವರಿಲ್ಲ, ನರಕದಿಂದ ವರದಿ ತಂದವರಿಲ್ಲ!

ಯಾವುದು ಪಾಪಕೃತ್ಯ, ಯಾವುದು ಪಾಪಕೃತ್ಯವಲ್ಲ - ಎಂಬ ವಿಷಯದಲ್ಲಿ ಒಮ್ಮತವಿದೆ ಎನ್ನಲಾಗದು. ಈ ವಿಷಯದಲ್ಲಿ ವಿವಿಧ ಮತ - ಧರ್ಮಗಳ ಅನುಯಾಯಿಗಳ ನಡುವೆ ಭಿನ್ನಾಭಿಪ್ರಾಯಗಳಿವೆ. ಒಂದು ಮತಧರ್ಮವು ಪಾಪಕೃತ್ಯವೆಂದು ಪರಿಗಣಿಸಿದ್ದನ್ನು - ಉದಾಹರಣೆಗಾಗಿ ಗೋಹತ್ಯೆಯನ್ನು - ಮತ್ತೊಂದು ಮತ ಧರ್ಮವು ಪಾಪಕಾರ್ಯವೆಂದು ಪರಿಗಣಿಸದಿರಬಹುದು. ಅಂತೆಯೇ ಒಂದಾನೊಂದು ಕಾಲದಲ್ಲಿ ಒಂದಾನೊಂದು ಮತಧರ್ಮವು ಪುಣ್ಯಕಾರ್ಯ ಅಥವಾ ಪಾಪಕೃತ್ಯವೆಂದು ಪರಿಗಣಿಸಿದ ಕಾರ್ಯವನ್ನು ಅದೇ ಮತಧರ್ಮವು ಮುಂದೊಂದು ಕಾಲದಲ್ಲಿ ಹಾಗೆ ಭಾವಿಸದಿರಬಹುದು. ಇಂದು ತಿರಸ್ಕೃತವೂ, ತ್ಯಾಜ್ಯವೂ ಆಗಿರುವ ಸಹಗಮನ ಪದ್ಧತಿ, ದೇವದಾಸಿ ಪದ್ಧತಿ, ಅಸ್ಪೃಶ್ಯತೆ - ಇವೇ ಮೊದಲಾದವುಗಳನ್ನು ಉದಾಹರಿಸಬಹುದು.

ಹಾಗಾದರೆ, ಪಾಪ - ಪುಣ್ಯಗಳ ಕುರಿತು ಸಾರ್ವಕಾಲಿಕ, ಸಾರ್ವತ್ರಿಕ ಅಂಗೀಕಾರಾರ್ಹತೆಯನ್ನು ಪಡೆದಿರುವ ಸಾಮಾನ್ಯ ಸೂತ್ರವೊಂದುಂಟೆ? ಹೌದು, ಅಂತಹ ಒಂದು ಸಾಮಾನ್ಯ ಸೂತ್ರವನ್ನು ದ್ವಾಪರಯುಗದಲ್ಲಿ ಬದುಕಿ ಬಾಳಿದ ವ್ಯಾಸಮಹರ್ಷಿಗಳೇ ರೂಪಿಸಿದ್ದಾರೆ. ಅದೆಂದರೆ 'ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಮ್' - ಪರಪೀಡನೆಯೇ ಪಾಪ, ಪರೋಪಕಾರವೇ ಪುಣ್ಯ. ಪರರಿಗೆ ಹಿಂಸೆಕೊಡುವುದು ಪಾಪಕರ. ನಮಗೆ ಯಾವುದು ಅಪ್ರಿಯವೋ, ಅಹಿತವೋ, ಪ್ರತಿಕೂಲವೋ ಅದನ್ನು ಇತರರಿಗೆ ಎಸಗುವುದೇ ಪಾಪ - 'ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್'

ಹಿಂಸೆಯೆಂದರೆ ಕೇವಲ ಭೌತಿಕ, ದೈಹಿಕ ಹಿಂಸೆಯಷ್ಟೇ ಅಲ್ಲ, ಹೊಡೆಯದೆ, ಬಡಿಯದೆ ಇತರರಿಗೆ ನೋವನ್ನುಂಟುಮಾಡುವುದೂ ಹಿಂಸೆಯೇ. ಒಂದು ವಾಗ್ಬಾಣ ಉದ್ದೇಶಿತ ವ್ಯಕ್ತಿಯ ಮನಸ್ಸಿಗೆ ಎಷ್ಟು ನೋವನ್ನುಂಟುಮಾಡಬಲ್ಲುದು! ನಮ್ಮ ತ್ರಿಕರಣಗಳಾದ ದೇಹ, ಮಾತು, ಮನಸ್ಸುಗಳಿಂದ ಇತರರಿಗೆ ಹಿಂಸೆಯುಂಟಾಗುವ ಸಾಧ್ಯತೆಗಳಿರುವುದರಿಂದ ನಾವು ನಮ್ಮ ನಡೆ - ನುಡಿ - ಚಿಂತನಗಳ ವಿಚಾರದಲ್ಲಿ ವಿಶೇಷ ಎಚ್ಚರಿಕೆ ವಹಿಸಬೇಕಾಗುತ್ತದೆ. ದೈನಂದಿನ ವ್ಯವಹಾರ, ಕಾರ್ಯ ಚಟುವಟಿಕೆಗಳ ಮೇಲೂ ಕಣ್ಣಿಡಬೇಕಾಗುತ್ತದೆ. ಪರರಿಗೆ ಯಾವುದೇ ಬಗೆಯ ದೈಹಿಕ, ಮಾನಸಿಕ, ಆರ್ಥಿಕ, ಸಾಮಾಜಿಕ ಅಥವಾ ಮತ್ತಾವುದೇ ಬಗೆಯ ಹಿಂಸೆಯನ್ನುಂಟುಮಾಡುವ ನಡೆ - ನುಡಿ - ಚಿಂತನೆ - ವ್ಯಾಪಾರ - ವ್ಯವಹಾರಗಳೆಲ್ಲ ಪಾಪಕೃತ್ಯಗಳೇ. ಆದ್ದರಿಂದ ಅವು ವರ್ಜ್ಯ, ತ್ಯಾಜ್ಯ, ನಿಷಿದ್ಧ.

ಪರಪೀಡನೆ ಪಾಪವಾದರೆ, ಪರೋಪಕಾರವೇ ಪುಣ್ಯ. ಪರೋಪಕಾರ ಎಂದರೆ ಇತರರಿಗೆ ಹಣ ಅಥವಾ ವಸ್ತುರೂಪದಲ್ಲಿಯೇ ಸಹಾಯಮಾಡಬೇಕೆಂದು ಅರ್ಥವಲ್ಲ. ಧನಸಹಾಯ ಮತ್ತಿತರ ವಸ್ತುರೂಪದ ಸಹಾಯವು ಉಪಕಾರವೇ ಆದರೂ ಎಲ್ಲ ಸಂದರ್ಭಗಳಲ್ಲಿಯೂ ಹಣವನ್ನು ಕೊಡುವುದು ಅಗತ್ಯವಾಗಲಾರದು, ಸಾಧ್ಯವಾಗದಿರಲೂ ಬಹುದು. ಗುರುವು ತನ್ನ ಶಿಷ್ಯನಿಗೆ ವಸ್ತುರೂಪದಲ್ಲಿ ಏನನ್ನು ಕೊಡುವುದಿಲ್ಲ. ಅಂದ ಮಾತ್ರಕ್ಕೆ ಗುರುವಿನಿಂದ ಶಿಷ್ಯನಿಗೆ ಉಪಕಾರವಾಗಲಿಲ್ಲವೆನ್ನಬಹುದೆ?

ಪರರ ಕಷ್ಟವನ್ನು, ನೋವನ್ನು, ಅಳಲನ್ನು ತಿಲಮಾತ್ರವಾದರೂ ಕಡಿಮೆ ಮಾಡಬಲ್ಲ ಯಾವ ಒಂದು ಸಣ್ಣ ಕಾರ್ಯವಾದರೂ - ಕಡೆಗೆ ಒಂದು ಸಾಂತ್ವನದ ನುಡಿಯಾದರೂ - ಉಪಕಾರವೆನಿಸುತ್ತದೆ. ಖ್ಯಾತ ಕವಿ ಜಿ ಎಸ್. ಶಿವರುದ್ರಪ್ಪನವರ ನುಡಿಯಲ್ಲಿ 'ಒಂದು ಸವಿನುಡಿಯಲ್ಲಿ ವಿಶ್ವವನು ಸೃಷ್ಟಿಸಿಹ ಬೊಮ್ಮಗ್ರಿಹ ಶಕ್ತಿಯಿದೆ' ಅಂದಮೇಲೆ ಒಂದು ಸಾಂತ್ವನಪರ ಸವಿನುಡಿಯಿಂದಲೇ ಮಹೋಪಕಾರವೆಸಗುವುದು ಸಾಧ್ಯವೆಂದಾಯಿತು. ಇಂತಹ ಪರೋಪಕಾರ ಪ್ರತಿಯೊಬ್ಬರಿಗೂ ಸಾಧ್ಯ.

ಮುಖ್ಯವಾಗಿ ಬೇಕಾದದ್ದು ಹಣವಲ್ಲ, ಪದವಿ - ಅಧಿಕಾರಗಳಲ್ಲ; ಸಾಧನ - ಸಂಪನ್ಮೂಲಗಳಲ್ಲ, ಪರೋಪಕಾರ ಬುದ್ಧಿ. ಇತರರಿಗೆ ಸಹಾಯ ಮಾಡುವ ಮನೋವೃತ್ತಿ. ನಾಕ - ನರಕಗಳಿರಲಿ, ಇಲ್ಲದಿರಲಿ - ನಾವು ಇಂತಹ ಪರೋಪಕಾರ ಮನೋಭಾವವನ್ನು ಬೆಳೆಸಿಕೊಂಡಲ್ಲಿ ಜಗತ್ತು ಈಗಿರುವುದಕ್ಕಿಂತ ಹೆಚ್ಚು ಸುಖ - ಸಂತೋಷ - ಶಾಂತಿಗಳನ್ನು ಪಡೆದೀತು, ನಮ್ಮ ಬಾಳು ಬಂಗಾರವಾದೀತು; ನಂದನ ವಾದೀತು.

# ಕಠೋಪನಿಷತ್

- ಎಂ. ಸಿ. ರಾಮರಾವ್.

## ಅಧ್ಯಾಯ ೧ ವಲ್ಲಿ ೧

ಉಪನ್ ಹ ವೈ ವಾಜಶ್ರವಸಃ
ಸರ್ವವೇದಸಂದದೌ
ತಸ್ಯಹ ನಚಿಕೇತಾನಾಮಪುತ್ರ ಆಸ

ವಿಶ್ವಜಿದ್ಯಾಗದಲ್ಲಿ ವಾಜಶ್ರವಸನು ಸ್ವರ್ಗಫಲಗಳ ಬಯಕೆಯುಳ್ಳವನಾಗಿ ತನ್ನ ಸರ್ವಸ್ವವೆಲ್ಲವನ್ನೂ ದಾನ ಮಾಡಿದನು. ಅವನಿಗೆ ನಚಿಕೇತನೆಂಬ ಒಬ್ಬ ಮಗನಿದ್ದನು.

ತಂಹ ಕುಮಾರಂ ಸಂತಂ
ದಕ್ಷಿಣಾಸುನೀಯಮಾನಾಸು
ಶ್ರದ್ಧಾಽಽವಿವೇಶ ಸೋಽಮನ್ಯತ

ಹಂಚಲು ದಾನವಸ್ತುಗಳನ್ನು ದೊರೆಯುತರುತ್ತಿದ್ದಾಗ ನಚಿಕೇತನು ಇನ್ನೂ ಮಗವಾಗಿದ್ದರೂ ಶ್ರದ್ಧೆಯಿಂದಲೂ, ಸತ್ಯಭಾವನೆಯಿಂದಲೂ ತುಂಬಿದವನಾಗಿದ್ದನು. ಅವನು ತನ್ನಲ್ಲಿ ತಾನು ಯೋಚಿಸಿದನು

ಪೀತೋದಕಾ ಜಗ್ಧತೃಣಾ
ದುಗ್ಧದೋಹಾನಿರಿಂದ್ರಿಯಾಃ
ಅನಂದಾನಾಮ ತೇ
ಲೋಕಾಸ್ತಾನ್ ಸಗಚ್ಛತಿ ತಾ ದದತ್

ನೀರು ಕುಡಿಯುವುದು, ಹುಲ್ಲು ತಿನ್ನುವುದು, ಹಾಲು ಕೊಡುವುದು, ಕರು ಹಾಕುವುದು ಇವೆಲ್ಲ ಮುಗಿದಿರುವ ಇಂತಹ ಹಸುಗಳನ್ನು ದಾನಮಾಡುವವನು ಸೇರುವ ಲೋಕಗಳು ವಾಸ್ತವವಾಗಿ ಆನಂದರಹಿತವಾಗಿರುತ್ತವೆ.

ಸಹೋವಾಚ ಪಿತರಂ ತಾತ
ಕಸ್ಮೈಮಾಂ ದಾಸ್ಯಸೀತಿ
ದ್ವಿತೀಯಂ ತೃತೀಯಂ ತಂ
ಹೋವಾಚ, ಮೃತ್ಯವೇತ್ವಾ ದದಾಮಿತಿ

ತಂದೆಯನ್ನು ಕುರಿತು ಅವನು ಹೇಳಿದ, "ಅಪ್ಪಾ ನನ್ನನ್ನು ಯಾರಿಗೆ ದಾನ ಕೊಡುತ್ತೀಯೆ?" ಇದನ್ನು ಅವನು ಎರಡನೆಯ ಸಲ, ಮೂರನೆಯ ಸಲ ಕೇಳಿದ ಆಗ ತಂದೆಯು ಕೋಪಗೊಂಡವನಾಗಿ "ನಿನ್ನನ್ನು ನಾನು ಮೃತ್ಯುವಿಗೆ ಕೊಡುತ್ತೇನೆ" ಎಂದು ಹೇಳಿದನು

ಬಹೂನಾಮೇಮಿ ಪ್ರಥಮೋ
ಬಹೂನಾಮೇಮಿ ಮಧ್ಯಮಃ
ಕಿಂಸ್ವಿತ್ ಯಮಸ್ಯ ಕರ್ತವ್ಯಂ
ಯನ್ಮಯಾದ್ಯಕರಿಷ್ಯತಿ

ಅನೇಕ ಮಕ್ಕಳಲ್ಲಿ ನಾನು ಪ್ರಥಮನಾಗಿದ್ದೇನೆ ಮತ್ತೆ ಅನೇಕರಲ್ಲಿ ಮಧ್ಯಮನೂ ಆಗಿದ್ದೇನೆ. ಆದ್ದರಿಂದ ನನ್ನನ್ನು ತಂದೆಯು ಯಮನಿಗೆ ಕೊಡುತ್ತೇನೆಂದುದು ಏತಕ್ಕೆ? ನನ್ನನ್ನು ಯಮನಿಗೆ ಕೊಡುವುದರಿಂದ ಯಮನ ಯಾವ ಕೆಲಸವು ನೆರವೇರುತ್ತದೆ? ಎಂದುಕೊಂಡನು

ಅನುಪಶ್ಯ ಯಥಾಪೂರ್ವೇ
ಪ್ರತಿಪಶ್ಯ ತಥಾಪರೇ
ಸಸ್ಯಮಿವಮರ್ತ್ಯಃ ಪಚ್ಯತೇ
ಸಸ್ಯಮಿವಾಜಾಯತೇ ಪುನಃ

ಪ್ರಾಚೀನರು ಹೇಗೆ ನಡೆದುಕೊಂಡರು ಎಂಬುದನ್ನು ನೆನೆ, ಆಧುನಿಕರು ಹೇಗೆ ವರ್ತಿಸುತ್ತಾರೆ ಎಂಬುದನ್ನೂ ಗಮನಿಸು. ಮರ್ತ್ಯನು ಕಾಳುಗಳಂತೆ ಹಣ್ಣಾಗುತ್ತಾನೆ. ಉದುರುತ್ತಾನೆ ಮತ್ತೆ ಅವನು ಕಾಳುಗಳಂತೆ ಹುಟ್ಟುತ್ತಾನೆ

ವೈಶ್ವಾನರಃ ಪ್ರವಿಶತ್ಯ ತಿಥಿಃ
ಬ್ರಾಹ್ಮಣೋಗೃಹಾನ್
ತಸ್ಯೈತಾಂ ಶಾಂತಿಂ ಕುರ್ವಂತಿ
ಹರವೈವಸ್ವತೋದಕಂ

ಪವಿತ್ರವಾದ ಬ್ರಾಹ್ಮಣ ಅತಿಥಿಯು, ಮನೆಗಳನ್ನು ಅಗ್ನಿಯಂತೆ ಪ್ರವೇಶಿಸುತ್ತಾನೆ ಆ ಗೃಹಸ್ಥರು ಅವನನ್ನು ಪ್ರಸಿದ್ಧವಾದ ಶಾಂತಿ ನೈವೇದ್ಯದಿಂದ ಸಂತುಷ್ಟಿಗೊಳಿಸುತ್ತಾರೆ ಓ ಯಮಧರ್ಮರಾಜನೇ ನೀರನ್ನು ತೆಗೆದುಕೊಂಡು ಬಾ.

ಆಶಾಪ್ರತೀಕ್ಷೇ ಸಂಗತಂ ಸೂನ್ರತಾಂ ಚ
ಇಷ್ಟಾಪೂರ್ತೇ ಪುತ್ರಪಶೂಂಶ್ಚ ಸರ್ವಾನ್
ಏತತ್ವೃಂಕ್ತೇ ಪುರುಷಸ್ಯಾಲ್ಪಮೇಧಸೋ
ಯಸ್ಯಾನರ್ಶ್ನ ವಸತಿ ಬ್ರಾಹ್ಮಣೋ ಗೃಹೇ

ಯಾವ ಅಲ್ಪಬುದ್ಧಿಯಾದವನ ಮನೆಯಲ್ಲಿ ಬ್ರಾಹ್ಮಣನು ಆಹಾರವಿಲ್ಲದೆ ಇರುತ್ತಾನೆಯೋ ಅಂಥಹವನ ಆಶೆ ಆಕಾಂಕ್ಷೆಗಳೂ, ಸತ್ಸಂಗದ ಫಲ, ಮಧುರವೂ ಪ್ರಯೋಜನಕಾರಿಯೂ ಆದ ಮಾತಿನಿಂದ ಒದಗುವ ಫಲ, ಧರ್ಮಕಾರ್ಯಗಳು ಪರೋಪಕಾರ್ಯ, ಪಶುಪುತ್ರರು ಎಲ್ಲರೂ ಎಲ್ಲರೂ ನಾಶವಾಗುತ್ತದೆ.

ತಿಸ್ರೋ ರಾತ್ರೀರ್ಯದ ವಾತ್ಸೀರ್ಗೃಹೇಮೇ
ಅನರ್ಶ್ನ ಬ್ರಹ್ಮನ್ ಅತಿಥಿರ್ನಮಸ್ಯಃ
ನಮಸ್ತೇಽಸ್ತು ಬ್ರಹ್ಮನ್ ಸ್ವಸ್ತಿ ಮೇಽಸ್ತು
ತಸ್ಮಾತ್ ಪ್ರತಿ ತ್ರೀನ್ ವರಾನ್ ವೃಣೀಷ್ವ

ಓ ಸತ್ಪುರುಷನೇ ಗೌರವಾರ್ಹ ಅತಿಥಿಯಾಟ ನೀನು ನನ್ನ ಮನೆಯಲ್ಲಿ ಮೂರು ರಾತ್ರಿ ಆಹಾರವಿಲ್ಲದೆ ತಂಗಿದ್ದೀಯೆ ಆ ಕಾರಣಕ್ಕಾಗಿ ಮೂರು ವರಗಳನ್ನು ಆರಿಸಿಕೋ ಓ ಪವಿತ್ರ ಮೂರ್ತಿ, ನಿನಗಿದೋ ನಮಸ್ಕಾರ. ನಿನಗೆ ಮಂಗಳವಾಗಲಿ ಎಂದು ಯಮನು ಹೇಳುತ್ತಾನೆ.

ಶಾಂತಸಂಕಲ್ಪಃ ಸುಮನಾ ಯಥಾಸ್ಯಾತ್
ವೀತಮನ್ಯುಃ ಗೌತಮೋಮಾಽಭಿಮೃತ್ಯೋ
ತ್ವತ್ ಪ್ರಸೃಷ್ಟಂ ಮಾಽಭಿವದೇತ್ ಪ್ರತೀತ
ಏತತ್ ತ್ರಯಾಣಾಂ ಪ್ರಥಮಂ ವರಂ ವೃಣೇ

ಆಗ ನಚಿಕೇತನು ಹೇಳುತ್ತಾನೆ "ಓ ಮೃತ್ಯು ಮೊದಲನೆಯದಾಗಿ ತಾನು ಈ ವರವನ್ನು ಆರಿಸಿಕೊಳ್ಳುತ್ತೇನೆ. ನನ್ನ ತಂದೆ ಗೌತಮನು ಸಂತೋ

ಷದಿಂದಿರಲಿ, ಕೋಪಕಾತರತೆಗಳಿಂದ ಮುಕ್ತನಾಗಿರಲಿ, ನೀನು ನನ್ನನ್ನು ಹಿಂದಕ್ಕೆ ಕಳುಹಿಸಿದಾಗ ಅವರು ನನ್ನನ್ನು ಗುರುತಿಸಿ ಸ್ವಾಗತಿಸಲಿ"

ಯಥಾಪುರಸ್ತಾತ್ ಭವಿತಾಪ್ರತೀತ
ಔದ್ದಾಲಕಿರಾರುಣಿರ್ಮತ್ ಪ್ರಸೃಷ್ಟಃ
ಸುಖಂರಾತ್ರೀಃ ಶಯಿತಾವೀತಮನ್ಯುಃ
ತ್ವಾಂ ದದೃಶಿವಾನ್
ಮೃತ್ಯು ಮುಖಾತ್ ಪ್ರಮುಕ್ತಂ

ಯಮನು ಹೇಳುತ್ತಾನೆ "ಮೃತ್ಯುವಿನ ದವಡೆಯಿಂದ ಬಿಡುಗಡೆ ಹೊಂದಿದ ನಿನ್ನನ್ನು ನನ್ನ ಅಪ್ಪಣೆಯಂತೆ ಗೌತಮನು ಗುರುತಿಸುತ್ತಾನೆ ನಿನ್ನ ವಿಷಯಕ್ಕೆ ಅವನು ಎಂದಿನಂತೆಯೇ ಇರುತ್ತಾನೆ. ಮತ್ತು ಆತನು ರಾತ್ರಿಯಲ್ಲಿ ಸುಖವಾಗಿ ನಿದ್ರೆ ಮಾಡುತ್ತಾ ಕೋಪರಹಿತನಾಗುತ್ತಾನೆ"

ಸ್ವರ್ಗೇಲೋಕೇ ನ ಭಯಂ ಕಿಂಚನಾಸ್ತಿ
ನತತ್ರತ್ವಂ ನ ಜರಯಾಬಿಭೇತಿ
ಉಭೇತೀರ್ತ್ವಾ ಅಶನಾಯಾಪಿಪಾಸೇ
ಶೋಕಾತಿಗೋ ಮೋದತೇ ಸ್ವರ್ಗಲೋಕೇ

ನಚಿಕೇತನು ಹೇಳುತ್ತಾನೆ - ಓ ಮೃತ್ಯುವೇ ಸ್ವರ್ಗದಲ್ಲಿ ಭಯವು ಕಿಂಚಿತ್ತೂ ಇಲ್ಲ, ಅಲ್ಲಿ ನೀನೂ ಇಲ್ಲ. ಮುಪ್ಪಿನ ಭಯವೂ ಅಲ್ಲಿಲ್ಲ. ಸ್ವರ್ಗಲೋಕದಲ್ಲಿ ಹಸಿವು ನೀರಡಿಕೆಗಳು ಎರಡನ್ನೂ, ಶೋಕವನ್ನೂ ದಾಟಿ ವ್ಯಕ್ತಿಯು ಸಂತೋಷವನ್ನು ಅನುಭವಿಸುತ್ತಾನೆ.

ಸತ್ವಮಗ್ನಿಂ ಸ್ವರ್ಗ್ಯಂ
ಅಧ್ಯೇಷಿ ಮೃತ್ಯೋ
ಪ್ರಬ್ರೂಹಿ ತಂ ಶ್ರದ್ಧಧಾನಾಯಮಹ್ಯಂ
ಸ್ವರ್ಗಲೋಕಾ ಅಮೃತತ್ವಂ ಭಜಂತ
ಏತತ್ ದ್ವಿತೀಯೇನ ವೃಣೇವರೇಣ

ಓ ಮೃತ್ಯುವೇ ಸ್ವರ್ಗಕ್ಕೆ ಒಯ್ಯುವ ಅಗ್ನಿಯಾಗವು ಯಾವುದೆಂಬುದನ್ನು ನೀನು ಬಲ್ಲೆ. ಶ್ರದ್ಧೆಯಿಂದ ಕೂಡಿರುವ ನನಗೆ ಅದನ್ನು ಬೋಧಿಸು ಸ್ವರ್ಗದಲ್ಲಿರುವವರು ಮೃತ್ಯುರಹಿತರು ಎಂದು ಕೇಳಿದ್ದೇನೆ. ಇದನ್ನೇ ನಾನು ಎರಡನೆಯ ವರವಾಗಿ ಆರಿಸಿಕೊಳ್ಳುತ್ತೇನೆ."

ಪ್ರತೇಬ್ರವೀಮಿ ತದುಮೇ ನಿಬೋಧ
ಸ್ವರ್ಗ್ಯಮಗ್ನಿಂ ನಚಿಕೇತಃ ಪ್ರಜಾನನ್
ಅನಂತಲೋಕಾಪ್ತಿಮಥೋ ಪ್ರತಿಷ್ಠಾಂ
ವಿದ್ಧಿತ್ವಮೇತಂ ನಿಹಿತಂ ಗುಹಾಯಾಂ

ಯಮನು ಹೇಳುತ್ತಾನೆ "ಸ್ವರ್ಗಕ್ಕೆ ಒಯ್ಯುವ ಅಗ್ನಿಯಾಗವ್ಯಾವುದೆಂಬುದನ್ನು ಚೆನ್ನಾಗಿ ಬಲ್ಲವನಾಗಿ ನಾನು ಅದನ್ನು ನಿನಗೆ ತಿಳಿಸುತ್ತಿದ್ದೇನೆ. ಓ ನಚಿಕೇತಾ, ಅದನ್ನು ನನ್ನಿಂದ ತಿಳಿದುಕೋ, ಅನಂತಲೋಕವನ್ನು ಪಡೆಯುವ ದಾರಿ, ಈ ಲೋಕದ ಆಧಾರ. ಅದು ವೇದವನ್ನು ತಿಳಿದವರ ಹೃದಯದಲ್ಲಿ ಗೂಢವಾಗಿ ಅಡಗಿದೆ ಎಂಬುದಾಗಿ ಇದನ್ನು ತಿಳಿದುಕೋ"

ಲೋಕಾದಿಮಗ್ನಿಂ ತಮುವಾಚ ತಸ್ಮೈ
ಯಾ ಇಷ್ಟಕಾ ಯಾವತೀರ್ವಾಯಥಾವಾ
ಸಚಾಪಿ ತತ್ ಪ್ರತ್ಯವದತ್ ಯಥೋಕ್ತಂ
ಅಥಾಸ್ಯ ಮೃತ್ಯುಃ ಪುನರೇವಾಹತುಷ್ಟಃ

ಅನಂತರ ಯಮನು ಈ ಜಗತ್ತಿನ ಮೂಲವಾದ ಆ ಅಗ್ನಿಯನ್ನೂ ಅದರ ವೇದಿಕೆಯನ್ನು ರಚಿಸಲು ಯಾವ ರೀತಿಯ ಎಷ್ಟು ಇಟ್ಟಿಗೆಗಳು ಬೇಕೆಂಬುದನ್ನೂ, ಯಜ್ಞಾಗ್ನಿಯನ್ನು ಹೊತ್ತಿಸುವುದು ಹೇಗೆಂಬುದನ್ನೂ ವಿವರಿಸಿದನು ನಚಿಕೇತನು ಈ ವರದಿಯನ್ನು ಕೇಳಿದಂತೆ ಪ್ರತಿಯೊಂದನ್ನೂ ಪುನರುಚ್ಚರಿಸಿದನು ಅದರಿಂದ ಸುಪ್ರೀತನಾದ ಯಮನು ಹೇಳುತ್ತಾನೆ

ತಮಬ್ರವೀತ್ ಪ್ರೀಯಮಾಣೋ ಮಹಾತ್ಮಾ
ವರಂ ತವೇಹಾದ್ಯದದಾಮಿಭೂಯಃ
ತವೈವನಾಮ್ನಾ ಭವಿತಾಯಮಗ್ನಿಃ
ಸೃಂಕಾಂಚೇಮಾಂ ಅನೇಕ ರೂಪಾಂ ಗೃಹಾಣ

ನಚಿಕೇತ, ನಾನು ನಿನ್ನ ವಿಚಾರದಲ್ಲಿ ತುಂಬ ಸಂತುಷ್ಟನಾಗಿದ್ದೇನೆ. ಈಗಿನಿಂದಲೇ ಇಲ್ಲಿಯೇ ನಿನಗೆ ಇನ್ನೊಂದು ಹೆಚ್ಚಿನ ವರವನ್ನು ಕೊಡುತ್ತೇನೆ ಇನ್ನು ಮುಂದೆ ಈ ಅಗ್ನಿಯು ನಿನ್ನ ಹೆಸರನ್ನು ಪಡೆಯಲಿ. ಅಲ್ಲದೆ ಈ ಅನೇಕ ವರ್ಣಗಳ ಹಾರವನ್ನು ಸ್ವೀಕರಿಸು ಎಂದನು

ತ್ರಿಣಾಚಿಕೇತ ಸ್ತ್ರಿಭಿರೇತ್ಯ ಸಂಧಿಂ
ತ್ರಿಕರ್ಮಕೃತ್ ತರತಿ ಜನ್ಮಮೃತ್ಯೂಃ
ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ
ನಿಚಾಯ್ಯೇಮಾಂ ಶಾಂತಿಮತ್ಯಂತಮೇತಿ

"ನಚಿಕೇತ ಯಜ್ಞವನ್ನು ಮೂರುಸಲ ಮಾಡಿ, ತಾಯಿ ತಂದೆ ಮತ್ತು ಗುರು ಈ ಮೂವರ ಉಪದೇಶದಿಂದ ಕೂಡಿಕೊಂಡವನು ಮತ್ತು ವೇದಾಧ್ಯಯನ, ಕರ್ಮಾಚರಣೆ, ದಾನ ಮೊದಲಾದ ಮೂರು ಕರ್ತವ್ಯಗಳನ್ನೂ ನೆರವೇರಿಸಿದವನು, ಹುಟ್ಟು ಸಾವುಗಳ ಆವೃತ್ತವನ್ನು ದಾಟುತ್ತಾನೆ ಬ್ರಹ್ಮಜ್ಞನೂ, ಪೂಜಾರ್ಹನೂ, ಸರ್ವಜ್ಞನೂ, ಪ್ರಕಾಶಮಾನನೂ ಆದ ಅಗ್ನಿಯನ್ನು ತಿಳಿದು ಸಾಕ್ಷಾತ್ಕಾರ ಮಾಡಿಕೊಂಡಮೇಲೆ ಪರಮಶಾಂತಿಯನ್ನು ಪಡೆಯುತ್ತಾನೆ

ತ್ರಿಣಾಚಿಕೇತಸ್ತ್ರಯಮೇತತ್ ವಿದಿತ್ವಾ
ಯ ಏವಂ ವಿದ್ವಾಂಶ್ಚಿನುತೇ ನಾಚಿಕೇತಂ
ಸಮೃತ್ಯುಪಾಶಾ ಪುರತಃ ಪ್ರಣೋದ್ಯ
ಶೋಕಾತಿಗೋಮೋದತೇ ಸ್ವರ್ಗಲೋಕೇ

ಇಟ್ಟಿಗೆಗಳ ವಿಷಯದ ಮೂರು ವಿವರಗಳನ್ನು ತಿಳಿದ ಜ್ಞಾನಿಯಾದ ಪುರುಷನು ಮೂರು ಸಲ ನಾಚಿಕೇತವನ್ನು ಯಾರು ಆಚರಿಸುತ್ತಾರೋ ಅವರು ದೇಹಪತನದ ಮುನ್ನವೇ ಮೃತ್ಯುಪಾಶವನ್ನು ಕತ್ತರಿಸಿ, ದುಃಖಮುಕ್ತವಾದ ಸ್ವರ್ಗಸುಖವನ್ನು ಅನುಭವಿಸುತ್ತಾರೆ.

ಏಷತೇಽಗ್ನಿರ್ನಚಿಕೇತಃ ಸ್ವರ್ಗ್ಯೋ
ಯಮವೃಣೇಥಾ ದ್ವಿತೀಯೇನವರೇಣ
ಏತಮಗ್ನಿಂ ತವೈವ ಪ್ರವಕ್ಷ್ಯನ್ತಿ ಜನಾಸಃ
ತೃತೀಯಂ ವರಂ ನಚಿಕೇತೋ ವೃಣೀಷ್ವ

"ಓ ನಚಿಕೇತಾ, ಇದೇ ಅಗ್ನಿ ಸ್ವರ್ಗಕ್ಕೆ ಒಯ್ಯುವಂಥದು ಇದನ್ನೇ ನೀನು ಎರಡನೆಯ ವರವಾಗಿ ಆರಿಸಿಕೊಂಡದ್ದು ಜನರು ಇದನ್ನು ನಿನ್ನ ಹೆಸರಿನಿಂದಲೇ ಕರೆಯುತ್ತಾರೆ. ಈಗ ಓ ನಚಿಕೇತಾ ಮೂರನೆಯ ವರವನ್ನು ಆರಿಸಿಕೋ."

ಯೇಯಂಪ್ರೇತೇ ವಿಚಿಕಿತ್ಸಾ ಮನುಷ್ಯೇ
ಅಸ್ತಿತ್ಯೇಕೇ ನಾಯಮಸ್ತೀತಿಚೈಕೇ
ಏತತ್ ವಿದ್ಯಾಂ ಅನುಶಿಷ್ಟಸ್ತ್ವಯಾಹಂ
ವರಾಣಾಮೇಷ ವರಸ್ತೃತೀಯಃ

ನಚಿಕೇತನು ಕೇಳುತ್ತಾನೆ "ಓ ಧರ್ಮರಾಯ, ಮನುಷ್ಯನು ಸತ್ತಾಗ ಈ ಸಂದೇಹ ಉಂಟು; ಕೆಲವರು ಅವನು ಇದ್ದಾನೆಂದು ಹೇಳುತ್ತಾರೆ, ಕೆಲವರು ಅವನು ಇರುವುದಿಲ್ಲವೆನ್ನುತ್ತಾರೆ ಈ ವಿಷಯದಲ್ಲಿ ನಿನ್ನಿಂದ ಉಪದೇಶವನ್ನು ಪಡೆಯುವ ಅಪೇಕ್ಷೆ ನನ್ನದು ವರಗಳಲ್ಲಿ ಇದು ನನ್ನ ಮೂರನೆಯ ವರ"

ದೇವೈರತ್ರಾಪಿ ವಿಚಿಕಿತ್ಸಿತಂ ಪುರಾ
ನಹಿ ಸುವಿಜ್ಞೇಯಂ ಅಣುರೇಷಧರ್ಮಃ
ಅನ್ಯಂವರಂ ನಚಿಕೇತೋವೃಣೀಷ್ವ
ಮಾಮೋಪರೋತ್ಸೀಃ ಅತಿಮಾಸೃಜೈನಂ

ಯಮನು ಹೇಳುತ್ತಾನೆ "ಈ ವಿಷಯದಲ್ಲಿ ಹಿಂದೆ ದೇವತೆಗಳಿಗೆ ಕೂಡ ಸಂದೇಹವಿತ್ತು, ವಿಷಯ ತುಂಬ ಸೂಕ್ಷ್ಮವಾದದ್ದು, ಅರ್ಥವಾಗುವುದು ಕಷ್ಟ ಆದ್ದರಿಂದ ಓ ನಚಿಕೇತಾ ಬೇರೆ ವರವನ್ನು ಆರಿಸಿಕೋ ಈ ಒಂದು ವಿಷಯದಲ್ಲಿ ನನ್ನನ್ನು ಬಲವಂತಮಾಡಬೇಡ, ನನ್ನನ್ನು ಬಿಟ್ಟು ಬಿಡು"

ದೇವೈರತ್ರಾಪಿ ವಿಚಿಕಿತ್ಸಿತಂ ಕಿಲ
ತ್ವಂ ಚ ಮೃತ್ಯೋಯನ್ನ ಸುಜ್ಞೇಯಮಾತ್ಥ
ವಕ್ತಾ ಚಾಸ್ಯತ್ವಾದೃಗನ್ಯೋನಲಭ್ಯೋ
ನಾನ್ಯೋ ವರಸ್ತುಲ್ಯ ಏತಸ್ಯ ಕಶ್ಚಿತ್

ನಚಿಕೇತನು ಹೇಳುತ್ತಾನೆ "ಓ ಮೃತ್ಯು ದೇವತೆಗಳಿಗೆ ಕೂಡ ಈ ವಿಷಯದಲ್ಲಿ ಸಂದೇಹವಿತ್ತು, ಇದು ತಿಳಿಯಲು ಕಷ್ಟವಾದದ್ದು ಎನ್ನುತ್ತೀಯ, ಆದರೆ ನಿನ್ನಂಥ ಮತ್ತೊಬ್ಬ ಗುರು ಸಿಕ್ಕುವುದು ದುರ್ಲಭ ಬೇರೆ ಯಾವ ವರವೂ ಇದಕ್ಕೆ ಸಮನಲ್ಲ ಎಂಬುದೇ ನನ್ನ ಭಾವನೆ"

ಶತಾಯುಷಃ ಪುತ್ರ ಪೌತ್ರಾನ್ ವೃಣೀಶ್ವ
ಬಹೂನ್ ಪಶೂನ್ ಹಸ್ತಿ ಹಿರಣ್ಯಮಶ್ವಾನ್
ಭೂಮೇರ್ಮಹದಾಯತನಂ ವೃಣೀಷ್ವ
ಸ್ವಯಂ ಚ ಜೀವಶರದೋಯಾವದಿಚ್ಛಸಿ

ಯಮನು ಹೇಳುತ್ತಾನೆ "ಓ ನಚಿಕೇತಾ ನೂರು ವರ್ಷ ಬಾಳುವ ಪುತ್ರ ಪೌತ್ರರನ್ನು ಅನೇಕ ಹಸುಗಳು, ಆನೆ, ಕುದುರೆಗಳು, ಯಥೇಚ್ಛವಾದ ಚಿನ್ನ, ಇವನ್ನೆಲ್ಲಾ, ಆರಿಸಿಕೋ. ಈ ಭೂಮಿಯ ಮೇಲೆ ವಿಶಾಲವಾದ ಪ್ರದೇಶವನ್ನು ಆರಿಸಿಕೋ ನೀನೂ ಕೂಡ ನಿನಗೆ ಇಷ್ಟಬಂದಷ್ಟು ಶರತ್ಕಾಲಗಳು ಬೇಕಾದರೆ ಬದುಕು."

ಏತತ್ ತುಲ್ಯಂ ಯದಿಮನ್ಯಸೇ ವರಂ
ವೃಣೀಷ್ವ ವಿತ್ತಂ ಚಿರಂಜೀವಿಕಾಂ ಚ
ಮಹಾಭೂಮೌ ನಚಿಕೇತಸ್ತ್ವಮೇಧಿ
ಕಾಮಾನಾಂ ತ್ವಾ ಕಾಮಭಾಜಂ ಕರೋಮಿ

ಇದಕ್ಕೆ ಸಮ ಎಂದು ನೀನು ಭಾವಿಸುವ ಐಶ್ವರ್ಯ, ದೀರ್ಘಜೀವನಗಳನ್ನು ವರವಾಗಿ ಕೇಳಿಕೋ, ಈ ವಿಶಾಲವಾದ ಭೂಮಿಗೆ ಅರಸನಾಗಿ ಇರು. ಎಲ್ಲ ಭೋಗಗಳನ್ನೂ ನೀನು ಅನುಭವಿಸುವವನನ್ನಾಗಿ ಮಾಡುತ್ತೇನೆ.

ಯೇಯೇಕಾಮಾದುರ್ಲಭಾಮರ್ತ್ಯಲೋಕೇ
ಸರ್ವಾನ್ ಕಾಮಾನ್ ಛನ್ದತಃ ಪ್ರಾರ್ಥಯಸ್ವ

ಕೃಷ್ಣಯಜುರ್ವೇದದ ಕಠಶಾಖೆಗೆ ಸೇರಿದ ಉಪನಿಷತ್ತು ಕಠೋಪನಿಷತ್ತು. ವಾಜಶ್ರವಸರ ಪುತ್ರ ನಚಿಕೇತ ಯಮಧರ್ಮರಾಯನನ್ನು ಭೇಟಿ ಮಾಡಿ ಅವನಿಂದ ಮೃತ್ಯುವಿನ ರಹಸ್ಯವನ್ನು ತಿಳಿಯುವುದು ಇಲ್ಲಿನ ವಿಷಯ. ಮೂರು ಮೂರು ವಲ್ಲಿಗಳಲ್ಲಿ ಹರಡಿದ ಎರಡು ಅಧ್ಯಾಯಗಳ ಇಲ್ಲಿನ ಸಂಭಾಷಣೆಯ ಸೊಗಸು ಓದಿಯೇ ಮನಗಾಣಬೇಕು. ಆತ್ಮ ಎಂದರೇನು? ಅಮರತ್ವ ಯಾವುದು? ಶ್ರದ್ಧೆ ಧೈರ್ಯ ಇಂದ್ರಿಯ ನಿಗ್ರಹ - ಮುಂತಾದವುಗಳನ್ನು ವಿವರಿಸಲಾಗಿದೆ. ಅತ್ಯಂತ ಕುತೂಹಲಕಾರಿಯಾಗಿ ಸಾಗುವ ಸಂಭಾಷಣಾ ವೈಖರಿ ಆಸಕ್ತಿಯನ್ನು ಕೆರಳಿಸುತ್ತದೆ.

☆ ☆ ☆

ಇಮಾರಾಮಾಃ ಸರಥಾಃ ಸತೂರ್ಯಾಃ
ನಹೀದೃಶಾ ಲಂಭನೀಯಾ ಮನುಷ್ಯೈಃ
ಅಭಿರ್ಮತ್ ಪ್ರತ್ತಾಭಿಃ ಪರಿಚಾರಯಸ್ವ
ನಚಿಕೇತೋಮರಣಂ ಮಾನುಪ್ರಾಕ್ಷೀಃ

ಯಮನು ಮತ್ತೂ ಹೇಳುತ್ತಾನೆ. "ಈ ಮರ್ತ್ಯ ಜಗತ್ತಿನಲ್ಲಿ ಪಡೆಯಲು ಕಷ್ಟವಾಗಿರುವ ಎಲ್ಲ ಸುಖಗಳನ್ನೂ ನೀನು ನಿನ್ನ ಇಷ್ಟದಂತೆ ಕೇಳಿಕೋ; ರಥಗಳೂ, ವಾದ್ಯಗಳೊಡನಿರುವ ಈ ಸುಂದರಿಯರೂ, ಮನುಷ್ಯರಿಗೆ ಇಂಥವು ದುರ್ಲಭ. ಆದರೂ ಇವುಗಳನ್ನು ನನ್ನಿಂದ ಪಡೆದು ಅವುಗಳೊಡನೆ ಇರು. ಆದರೆ ಓ ನಚಿಕೇತಾ ಮೃತ್ಯುವಿನ ವಿಷಯದಲ್ಲಿ ಮಾತ್ರ ಪ್ರಶ್ನಿಸಬೇಡ."

ಶ್ವೋಭಾವಾ ಮರ್ತ್ಯಸ್ಯಯದಂತಕೈತತ್
ಸರ್ವೇಂದ್ರಿಯಾಣಾಂ ಜರಯಂತಿತೇಜಃ
ಅಪಿಸರ್ವಂ ಜೀವಿತಂ ಅಲ್ಪಮೇವ
ತವೈವ ವಾಹಾಸ್ತವ ನೃತ್ಯಗೀತೇ

ನಚಿಕೇತನು ಹೇಳುತ್ತಾನೆ, ಓ ಮೃತ್ಯುವೇ ನೀನು ವಿವರಿಸಿರುವ ಎಲ್ಲ ಸುಖಗಳೂ ಅಶಾಶ್ವತವಾದುವು. ಅವು ಮಾನವನ ಸಕಲೇಂದ್ರಿಯಗಳ ಶಕ್ತಿಯನ್ನೂ ಕ್ಷೀಣಗೊಳಿಸುತ್ತವೆ ಅಲ್ಲದೆ ಎಲ್ಲ ಬದುಕೂ ಕೇವಲ ಅಲ್ಪ, ನೀನು ಹೇಳುವ ಎಲ್ಲ ರಥಗಳೂ ನೃತ್ಯಗೀತೆಗಳೂ ನಿನ್ನಲ್ಲಿಯೇ ಇರಲಿ.

ನವಿತ್ತೇನ ತರ್ಪಣೀಯೋ ಮನುಷ್ಯೋ
ಲಪ್ಸ್ಯಾಮಹೇ ವಿತ್ತಮದ್ರಾಕ್ಷ್ಮಚೇತ್ವಾಂ
ಜೀವಿಷ್ಯಾಮೋ ಯಾವದೀಶಿಷ್ಯಸಿ ತ್ವಂ
ವರಸ್ತುಮೇ ವರಣೀಯಃ ಸ ಏವ

ಮತ್ತೂ ಹೇಳುತ್ತಾನೆ, ಮನುಷ್ಯನು ಎಂದೂ ಐಶ್ವರ್ಯದಿಂದ ತೃಪ್ತನಾಗಿಲ್ಲ. ಅಲ್ಲದೆ ನಿನ್ನನ್ನು ನೋಡಿರುವುದರಿಂದ ನಮಗೆ ಐಶ್ವರ್ಯವು ದೊರೆಯುವುದು ಖಚಿತ; ನೀನು ಆಳುವವರೆಗೂ ನಾವು ಬದುಕುವುದು ಖಚಿತ. ಆದರೆ ನಾನು ಪಡೆಯಲು ಅರ್ಹವಾಗಿರುವುದು ಅದು ಒಂದು ಮಾತ್ರವೇ

ಅಜೀರ್ಯತಾಂ ಅಮೃತಾನಾಂ ಉಪೇತ್ಯ
ಜೀರ್ಯನ್ ಮರ್ತ್ಯಃ ಕ್ವಧಃಸ್ಥಃ ಪ್ರಜಾನನ್
ಅಭಿಧ್ಯಾಯನ್ವರ್ಣ ರತಿಪ್ರಮೋದಾನ್
ಅತಿದೀರ್ಘೇ ಜೀವಿತೇ ಕೋರಮೇತ

ಮತ್ತೂ ಹೇಳುತ್ತಾನೆ, "ವಯಸ್ಸೇ ಇಲ್ಲದ ಅಮೃತಾತ್ಮರನ್ನು ಸಮೀಪಿಸಿ ತಿಳಿದ ಯಾವ ಮಾನವನು ತಾನೇ ಜರೆ ಮತ್ತು ಮೃತ್ಯುಗಳು ವಶನಾಗಿದ್ದು ನೃತ್ಯಗೀತಗಳಿಂದ ಒದಗುವ ಸಂತೋಷವನ್ನು ದೀರ್ಘಜೀವನದಲ್ಲಿ ರಮಿಸಬಯಸುತ್ತಾನೆ?"

ಯಸ್ಮಿನ್ನಿದಂ ವಿಚಿಕಿತ್ಸಂತಿ ಮೃತ್ಯೋ
ಯತ್ಸಾಂ ಪರಾಯೇ ಮಹತಿ ಬ್ರೂಹಿನಸ್ತತ್
ಯೋ ಯಂ ವರೋ ಗೂಢಮನುಪ್ರವಿಷ್ಟೋ
ನಾನ್ಯಂ ತಸ್ಮಾತ್ ನಚಿಕೇತಾವೃಣೀತೇ

ಓ ಮೃತ್ಯುವೇ, ಮಹದ್ವಿಷಯವಾದ ಇದರಾಚೆಯನ್ನು ಕುರಿತು ತಿಳಿಸು. ಅದರ ವಿಷಯದಲ್ಲೇ ಜನರಿಗೆ ಸಂದೇಹವಿರುವುದು, ಗಹನವೂ ರಹಸ್ಯಪೂರ್ಣವೂ ಆದ ಇದನ್ನು ಬಿಟ್ಟು ಬೇರೆ ಯಾವ ವರವನ್ನೂ ನಚಿಕೇತನು ವರಿಸಬಯಸುವುದಿಲ್ಲ.

✱ ✱ ✱

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ ಆಲಯದ ಶಾಸನಗಳು

ಆಂಗ್ಲ ಮೂಲ - **ಡಾ|| ಎನ್. ರಮೇಶನ್.**

ಕನ್ನಡಾನುವಾದ - **ಬಿ. ಎನ್. ಶ್ರೀನಿವಾಸನ್.**

(ಮುಂದುವರೆದಿದೆ)

ಮೇಲೆ ಹೇಳಿರುವ ಸಂಘಟನೆಗಳ ಹೊರತಾಗಿ ಆಲಯವು ತನ್ನ ದಾನದ ಗ್ರಾಮಗಳ ಭೂ ಅಭಿವೃದ್ಧಿಯಿಂದಾದ ಹೆಚ್ಚಿನ ಆದಾಯವನ್ನು ಪಡೆಯಬಹುದಾಗಿದ್ದಿತು. ಆಲಯ ಗ್ರಾಮದ ಧರ್ಮದರ್ಶಿಗಳಾಗಿದ್ದ ಆಲಯದ ಯಜಮಾನಿಕೆಯ ಮಂದಿ ಜಮೀನಿನ ದೇಸಾಯಗಾರನ ಪಾಲಿನ ಚಿಕ್ಕ ಭಾಗದ ಆದಾಯವನ್ನು ಬಿಟ್ಟು ದೊಡ್ಡ ಭಾಗದ ಹೆಚ್ಚುವರಿ ಹಣವನ್ನು ಭೂ ಅಭಿವೃದ್ಧಿಯಲ್ಲಿ ತೊಡಗಿಸುವ ಆ ಮೂಲಕ ಹೆಚ್ಚು ಆದಾಯವನ್ನು ಪಡೆಯುವ ಸ್ವಾತಂತ್ರ ಹೊಂದಿದ್ದರು

## ಹಿರಿದಾನಗಳ ಬಂಡವಾಳ

ದಾನಿಗಳು ನೀಡಿದ ಹಿರಿಯ ದಾನಗಳನ್ನು ಹೇಗೆ ಬಂಡವಾಳವನ್ನಾಗಿಸದೇಕೆಂಬುದರ ಬಗ್ಗೆ ತಿರುಮಲೆಯಲ್ಲಿನ ಹಲವಾರು ಶಾಸನಗಳು ಖಚಿತವಾದ ನಿರ್ದೇಶನಗಳನ್ನು ನೀಡುತ್ತ ಅವುಗಳ ಮೇಲಿನ ಆದಾಯದ ಬಳಕೆಯ ಬಗ್ಗೆಯೂ ನಿರ್ದಿಷ್ಟವಾಗಿ ಹೇಳುತ್ತವೆ.

ಶಕವರ್ಷ 1462 ಅಥವಾ ಕ್ರಿ ಶ 1540 ರ ಕಾಲದ ಅಚ್ಯುತರಾಯನ ಆಡಳಿತ ಸಮಯದಲ್ಲಿ ಆಲಯದ ಧರ್ಮದರ್ಶಿಗಳು ಅಂಗರಾಜ ನಾಗಪ್ಪಯ್ಯನ ಹೆಸರಿನಲ್ಲಿ (ಅಂಗರಾಜ ಎಂಬ ಹೆಸರಿನಿಂದಾಗಿ ಈತ ಅಚ್ಯುತರಾಯನ ಅಂಗರಕ್ಷಕರಲ್ಲಿ ಒಬ್ಬನಾಗಿದ್ದನೆಂದೂಹಿಸಬಹುದು) ತಿರುಮಲೆಯ ಆಲಯದ ಮೂರನೆಯ ಪ್ರಾಕಾರದಲ್ಲಿ ಒಂದು ಶಾಸನವನ್ನು ಕೆತ್ತಿಸಿದರು. ಇದರ ವಸ್ತುವೆಂದರೆ ಅಂಗರಾಜನು ಆಲಯದ ಶ್ರೀಭಂಡಾರಕ್ಕೆ 15000 ನರ್ಪಣಗಳನ್ನು (ನರ್ಪಣ ಎಂದರೆ ಬಹುಶಃ ಚಿನ್ನದ ನಾಣ್ಯ ಆಗಿರಬೇಕು.) ಸ್ವಾಮಿಯ ನೈವೇದ್ಯಕ್ಕಾಗಿ ಸಮರ್ಪಿಸಿದನೆಂದೂ,



ಆಲಯದ ಧರ್ಮದರ್ಶಿಗಳು ಈ ಧನವನ್ನು ಆಲಯದ ಗ್ರಾಮದಲ್ಲಿನ ಕೆರೆಗಳನ್ನೂ ಕಾಲುವೆಗಳನ್ನೂ ಅಭಿವೃದ್ಧಿಗೊಳಿಸಲು ಬಳಸಿ ಬಂದ ಹೆಚ್ಚುವರಿ ಆದಾಯದಿಂದಾಗಿ ದಾನಿಯ ಹೆಸರಿನಲ್ಲಿ 300 ಅಪ್ಪಪಡಿಯನ್ನು ತಯಾರಿಸಿ ತಿರುಮಲೆಯ ಸ್ವಾಮಿಗೆ ಅರ್ಪಿಸುವುದಾಗಿಯೂ ಕರಾರು ಆಯಿತು. ಈ ಅಪ್ಪ ಪಡಿಯ ನಿವೇದನೆಯನ್ನು ಪವಿತ್ರೋತ್ಸವದ ದಿನದಲ್ಲಿ, ರಥೋತ್ಸವದ ದಿನದಲ್ಲಿ, ಪ್ಲವೋತ್ಸವದಂದು ಹಾಗೂ 25 ಏಕಾದಶಿಗಳಂದು, ಊಂಜಲ್ ತಿರುನಾಳ್ ದಿನದಲ್ಲಿ ಸಮರ್ಪಿಸ ದೇಕೆಂದು ಶಾಸನದಲ್ಲಿ ವಿವರವಾಗಿ ಬರೆಯಲಾಗಿದೆ. ಹೀಗಾಗಿ ಈ ಹದಿನೈದು ಸಾವಿರ ನರ್ಪಣಗಳನ್ನು ಕೆರೆ ಕಾಲುವೆಗಳ ಜೀರ್ಣೋದ್ಧಾರದಲ್ಲಿ ಬಳಸಿದರೆ ಬರುವ ಹೆಚ್ಚಿನ ಉತ್ಪನ್ನವು 300 ಅಪ್ಪಪಡಿಗಳಿಗೆ ಸರಿಹೋಗುವಂತೆ ಇದ್ದಿತು ಎನ್ನಬೇಕು ಈ ಶಾಸನವು ದಾನದ ಹಣವನ್ನು ನೀರಾವರಿಯಲ್ಲಿ ಬಂಡವಾಳ ವಾಗಿ ಸುತ್ತ ಬಂದ ಉತ್ಪನ್ನದಲ್ಲಿ ಆಲಯದ ಒಂದು ಖಚಿತ ಸೇವೆಯಲ್ಲಿ ವೆಚ್ಚಿಸಬೇಕೆಂಬುದನ್ನು ಬಿಂಬಿಸುತ್ತದೆ

ಇಂತಹವೇ ವಿವರಗಳನ್ನು ನೀಡುವ ಇನ್ನೂ ಅನೇಕ ಶಾಸನಗಳಿವೆ. ಉದಾಹರಣೆಗೆ ತಿರುಮಲೆಯ ಆಲಯದ ಪಡಿಕಾವಲಿಯ ಗೋಪುರದ ಮೇಲಿನ (639 ಟಿ ಟಿ ) ಶಾಸನವು ಉಲಗಪ್ಪನ್ ನೀಡಿದ 800 ನರ್ ಪಣಗಳನ್ನು ಆಲಯಗ್ರಾಮಗಳ ಕೆರೆ ಕಟ್ಟೆಗಳ ದುರಸ್ತಿಯಲ್ಲಿ ಬಳಸಿ ಹೆಚ್ಚಿದ ಆದಾಯವನ್ನು ಶಾಸನದಲ್ಲಿ ಹೇಳಿರುವಂತೆ ಸ್ವಾಮಿಯ ಸೇವೆಯಲ್ಲಿ ಉಪಯೋಗಿಸದೇಕೆಂದು ಹೇಳಲಾಗಿದೆ.

ಇನ್ನು ಕೆಲವು ಶಾಸನಗಳಲ್ಲಿ ಉದಾಹರಣೆಗೆ ತಿ.ತಿ. 411 ನೇ ಶಾಸನದಲ್ಲಿ ಹೂಡಿಕೆಯ ಹಣ ನರ್ಪಣದಲ್ಲಿಯಾದರೆ ಉತ್ಪತ್ತಿಯನ್ನು ದೇವರ ಸೇವೆಯಲ್ಲಿ ಇನ್ನೊಂದು ನಿವೇದನೆಯಾದ ತಿರುಪ್ಪಾನಕದ ವೆಚ್ಚಗಳಿಗಾಗಿ ಬಳಸಲು ಹೇಳಲಾಗಿದೆ.

ಹೀಗಾಗಿ ಆಲಯಗ್ರಾಮಗಳ (ಆಲಯಕ್ಕೆ ರಾಜ ಅಥವಾ ಇನ್ನಿತರರು ನೀಡಿದ ಗ್ರಾಮಗಳ) ನೀರಾವರೀ ಅಭಿವೃದ್ಧಿಯ ಕಾರ್ಯಗಳು ಹಣ ಹೂಡಿಕೆಯ ಭದ್ರವೂ ಶಾಶ್ವತವೂ ಆದ ಮಾರ್ಗವನ್ನು ತೋರಿಸಿ ಸ್ವಾಮಿಯ ಸೇವೆಯಲ್ಲಿ ವೆಚ್ಚಕ್ಕೆ ಹೆಚ್ಚಿದ ಉತ್ಪತ್ತಿಯನ್ನು ನೀಡುವಲ್ಲಿ ಸಫಲವಾದವು. ಈ ಅಂಶವನ್ನು ಗಮನಿಸುವಾಗ ಈ ರೀತಿಯ ವ್ಯವಸ್ಥೆಯು ಸಮರ್ಥವಾದ ಆಡಳಿತವನ್ನು ಅಪೇಕ್ಷಿಸುತ್ತದೆ ಎಂಬುದನ್ನು ಮೊದಲಿಗೇ ತಿಳಿಯಬೇಕಾದ್ದು ಅಗತ್ಯ. 14 ನೇ ಶತಮಾನದ ನಂತರ ಆಲಯದ ಆಡಳಿತವು 12 ಮಂದಿ ಸ್ಥಾನತ್ತಾರರ (ಸ್ಥಳವಂದಿಗರ) ಕೈಗೆ ಬಂದಿದ್ದು, ಆಲಯದ ಸಮರ್ಥ ಆರ್ಥಿಕ ಆಡಳಿತದಿಂದಾಗಿ ಅದಕ್ಕೆ ತಕ್ಕಂತೆ ಆಲಯದ ಆದಾಯ ಮೂಲ

ಗಳೂ ಹೆಚ್ಚುತ್ತ ಹೋದವು ಎಂಬುದನ್ನು ಭರವಸೆಯಿಂದ ನಿರ್ಣಯಿಸಬಹುದಾಗಿದೆ

## ನೀರಾವರಿಯಿಂದಾದ ಉತ್ಪನ್ನ

ಬಹುತೇಕ ಶಾಸನಗಳಲ್ಲಿ ಬಂಡವಾಳದ - ದಾನದ - ಮೊತ್ತವನ್ನು ಪಣ - ಹಣ - ದ ಮೂಲದಲ್ಲಿಯೂ, ಉತ್ಪನ್ನವನ್ನು ಸ್ವಾಮಿಸೇವೆಯಲ್ಲಿ ಬಳಸುವ ನಿವೇದನೆಗಳಾದ ಅಪ್ಪಪಡಿ, ತಿರುಪ್ಪಾನಕಗಳ ರೂಪದಲ್ಲಿಯೂ ಗುರುತಿಸಲಾಗಿದೆ

ಹೀಗಾಗಿ ಬಂಡವಾಳ ಹೂಡಿಕೆ ಹಾಗೂ ಉತ್ಪನ್ನದ ಮೊತ್ತದ ನಡುವೆ ಒಂದು ಧನ ಸಾಮಾನ್ಯತೆಯನ್ನು ಕಂಡುಕೊಳ್ಳದಿದ್ದಲ್ಲಿ ಆಲಯದ ಹೂಡಿಕೆಯ ಪ್ರತಿಫಲದ ಪ್ರಮಾಣವನ್ನು ಗುರುತಿಸಲಾಗುವುದಿಲ್ಲ ಅದೃಷ್ಟವಶಾತ್ ಒಂದೆರಡು ಶಾಸನಗಳು ಈ ರೀತಿಯ ಲೆಕ್ಕಾಚಾರಕ್ಕೆ ತಕ್ಕ ಸಾಮಗ್ರಿಯನ್ನು ಒದಗಿಸುತ್ತವೆ.

ತಿ ತಿ 421 ಹಾಗೂ ಜಿ ಟಿ. 2 ಶಾಸನಗಳು ಮೇಲಿನ ವಿಷಯದಲ್ಲಿ ಪೂರ್ಣ ವಿವರಗಳನ್ನು ಬಿಟ್ಟುಕೊಡುತ್ತವೆ ತಿ ತಿ 421 ನೇ ಶಾಸನವು ತಿರುಮಲೆಯ ಆಲಯದ ಮೂರನೆಯ ಪ್ರಾಕಾರದ ದಕ್ಷಿಣದ ಗೋಡೆಯ ಮೇಲಿದೆ ಇದು ಶಕವರ್ಷ 1463 ರ (10-2-1542) ಪ್ಲವ ಸಂವತ್ಸರದ ಕುಂಭಮಾಸದಲ್ಲಿ ಸಲಕಯ್ಯದೇವ ಮಹಾರಾಜನ ಮಗ ಸಿಂಗರಾಜನ ಪರವಾಗಿ ಹಾಕಿಸಿದ ಶಿಲಾಶಾಸನ ಮಲೈಕುನಿಯ ನಿನ್ರಪೆರುಮಾಳರ ನಿವೇದನೆಯಲ್ಲಿ ಮುನ್ನೂರು ಅಪ್ಪಪಡಿಗಳನ್ನು ನಿವೇದಿಸಬೇಕೆಂದು ಈತನು ಹದಿನೈದು ಸಾವಿರ ನರ್ಪಣಗಳನ್ನು ಆಲಯದ ಶ್ರೀಭಂಡಾರಕ್ಕೆ ಒಪ್ಪಿಸಿದನು ಇದನ್ನು ಆಲಯದ ಧರ್ಮದರ್ಶಿಗಳು ಆಲಯಗ್ರಾಮಗಳ ಕೆರೆ ಕಟ್ಟೆಗಳ ದುರಸ್ತಿಯಲ್ಲಿ ಬಳಸಿ ಬಂದ ಉತ್ಪನ್ನದಿಂದ ಸ್ವಾಮಿಗೆ ಮುನ್ನೂರು ಅಪ್ಪಪಡಿಗಳನ್ನು ಒಪ್ಪಿಸಬೇಕಾಗಿದ್ದಿತು. ತಿ.ತಿ. 559 ನೇ ಶಾಸನದೊಡನೆ ಈ ಶಾಸನವನ್ನಿಟ್ಟು ನೋಡಿದಲ್ಲಿ ವರ್ಷಕ್ಕೆ ಮುನ್ನೂರು ಅಪ್ಪಪಡಿಗಳ ತಯಾರಿಕೆಗೆ ಬೇಕಾದ ಉತ್ಪನ್ನಕ್ಕೆ15000 ನರ್ಪಣಗಳ ಹೂಡಿಕೆ ಅಗತ್ಯವಿದ್ದಿತೆಂದು ತಿಳಿದುಬರುತ್ತದೆ.

ಶಕವರ್ಷ 1463 ರ ಪ್ಲವ ಸಂವತ್ಸರ ಮಕರ ಮಾಸದಲ್ಲಿನ ಪಂಚಮಿಯಂದು (20-1-1542) ತಿರುಪತಿಯ ಗೋವಿಂದರಾಜಸ್ವಾಮಿ ಆಲಯದಲ್ಲಿ ಪಾರ್ಥಸಾರಥಿ ದೇವಳದ ಒಳ ಪ್ರದಕ್ಷಿಣೆಯ ದಕ್ಷಿಣದ ಗೋಡೆಯಲ್ಲಿ (ಟಿ ಟಿ 2) ಆಲಯದ ಧರ್ಮದರ್ಶಿಗಳು ಒಬ್ಬಾನೊಬ್ಬ ಶ್ರೀ ರಾಮಯ್ಯಂಗಾರ್ಯನ ಹೆಸರಿನಲ್ಲಿ ಒಂದು ಶಾಸನವನ್ನು ಕೆತ್ತಿಸಿದರು ಅದರ ಪ್ರಕಾರ ದಾನಿಯು ಆಲಯದ ಅಧಿಕಾರಿಗಳಿಗೆ 56 ಪೊನ್ (ಚಿನ್ನದ ನಾಣ್ಯಗಳು) ಗಳನ್ನು ನೀಡಿ ಅದನ್ನು ಆಲಯ ಗ್ರಾಮಗಳಲ್ಲಿ ಬಂಡವಾಳವಾಗಿ ಹೂಡಿ ಬರುವ ಹೆಚ್ಚಿನ ಉತ್ಪನ್ನವನ್ನು ಶಾಸನದಲ್ಲಿ ಹೇಳಲಾದ ರೀತಿಯಲ್ಲಿ ದಾನಿಯ ಸೇವೆಯಾಗಿ ಸ್ವಾಮಿಯಲ್ಲಿ ನಿವೇದನೆ ಮಾಡಬೇಕೆಂದು ಸೂಚಿಸಲಾಗಿದೆ. ದಾನ ನೀಡಿದ ಬಗ್ಗೆ ವಿವರಗಳನ್ನು ತಿಳಿಸುತ್ತ ಒಂದು ಮನೋಹರಪ್ಪಡಿಯ ವೆಚ್ಚ ಐದು ಪಣಗಳೆಂದೂ ದೋಸೆ ಪಡಿಗೆ ಮೂರು ಪಣಗಳೆಂದೂ, ಅಪ್ಪಪಡಿಯ ವೆಚ್ಚ ಆರು ಪಣಗಳೆಂದೂ ನಿರ್ಧರಿಸಲಾಗಿದೆ. ಇವೆಲ್ಲ ನೈವೇದ್ಯವನ್ನು ಪೆನುಕೊಂಡೆ ಸೀಮೆಯ ಕುಂದನ್ನಲು ಗ್ರಾಮವಾಸಿಯಾದ ಕಾಶ್ಯಪ ಗೋತ್ರದ ಆಪಸ್ತಂಭಸೂತ್ರ ಯಜುಃಶಾಖೆಯ ದಾನಿಯ ಹೆಸರಿನಲ್ಲಿ (ಶಾಸನ ತ್ರುಟಿತವಾಗಿದೆ) ದೇವರಿಗೆ ಸಮರ್ಪಿಸಬೇಕು ಇದರಿಂದಾಗಿ ಒಂದು ಅಪ್ಪಪಡಿಗೆ ಆರು ಪಣಂಗಳು ಬೇಕಾಗುತ್ತವೆ

ಮೇಲೆ ಹೇಳಿದ ಎರಡು ಶಾಸನಗಳಿಂದಾಗಿ ತಿರುಮಲೆಯ ಆಲಯದಲ್ಲಿ ಹೂಡಿದ ಬಂಡವಾಳದ ಮೂಲದಿಂದ ಎಷ್ಟು ಆದಾಯವಾಗುತ್ತಿದ್ದಿತು ಎಂಬುದು ತಿಳಿದುಬರುತ್ತದೆ. ಎರಡೂ ಶಾಸನಗಳೂ 1542 ರಲ್ಲಿನ ಜನವರಿ - ಫೆಬ್ರವರಿ ತಿಂಗಳಿನಲ್ಲಿ ಕೆತ್ತಲಾಗಿರುವುದರಿಂದ ಸಮಕಾಲಿಕವಾಗಿ, ಆ ಕಾಲದ ಬೆಲೆಗಳನ್ನು ಸರಿಯಾಗಿ ಸೂಚಿಸಿವೆ ಎಂದು ಹೇಳಬರುವುದು ಒಂದು ಅಪ್ಪಪಡಿಯ ಬೆಲೆ ಆರು ಪಣವಾದ್ದರಿಂದ ಮುನ್ನೂರು ಅಪ್ಪಪಡಿಗಳಿಗೆ 1800 ಪಣದ ಉತ್ಪತ್ತಿ ಬೇಕಾದಾಯಿತು ಹೀಗಾಗಿ 15000 ನರ್ಪಣಗಳ ಹೂಡಿಕೆಯಿಂದಾಗಿ 1800 ಪಣದ ಉತ್ಪತ್ತಿ ಹೆಚ್ಚುವರಿ ಆದಾಯ ವೆಂದಾಯಿತು. ಇದರಿಂದಾಗಿ ಉತ್ಪಾದನೆಯು ಹೂಡಿಕೆಯ ಹನ್ನೆರಡು ಶತಾಂಶವಾಗಿರುತ್ತದೆ ಎಂಬುದು ತಿಳಿಯುತ್ತದೆ.

ನೀರಾವರೀ ಕಾಲುವೆಗಳ ಜೀರ್ಣೋದ್ಧಾರದಿಂದ ಬಂದ ಹೆಚ್ಚುವರಿ ಆದಾಯ ಇಡಿಯಾಗಿ ಆಲಯಕ್ಕೆ ಬರುತ್ತಿದ್ದಿತು ಎಂದು ಹೇಳಬರುವುದಿಲ್ಲ ಆಲಯದ ಭಾಗದ ಆದಾಯ ಯಾವಾಗಲೂ ಮೇಲ್‌ವರಂ ಆಗಿದ್ದಿತು ಹೀಗಾಗಿ ಆಲಯ ಗ್ರಾಮಗಳಲ್ಲಿನ ನೀರಾವರೀ ಅಭಿವೃದ್ಧಿಯಿಂದಾಗಿ ಭೂಮಿಯ ಬೇಸಾಯಗಾರನಿಗೆ ದೊರೆಯುತ್ತಿದ್ದ ಆ ಜಮಾನಿನ ಬೆಳೆದ ಬೆಳೆಗಳನ್ನು ಅನುಸರಿಸಿ ಆದಾಯ ಕುಡಿವರಂನಲ್ಲಿಯೂ ಹೆಚ್ಚಾಗುತ್ತಿದ್ದಿತು



(ಮುಂದುವರೆಯುವುದು)

### ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ

# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

(ದಾನಗಳಿಗೆ 100 ಶತಾಂಶ ಆದಾಯ ತೆರಿಗೆ ವಿನಾಯಿತಿ - 1961 ರ ಆದಾಯ ತೆರಿಗೆ ಕಾಯದೆಯ 35 ಸಿ.ಪಿ.ಬಿ. ಕಲಮಿನಂತೆ)

# ಒಂದು ವಿನಂತಿ

ಸಸಿಯೊಂದ ಬೆಳೆವವನು ದೇವರಿಗೆ ಸೇವಕನು
ತಲೆ ಮಾರು ಗಳಿಗೆಲ್ಲ ನೆರಳನವ ಹರಿಸುವನು
ಹರಸುವರು ಜನರವನ ಅವನೆಂದು ಕಾಣದರು

ತಿರುಮಲೆಯ ಪವಿತ್ರವಾದ ಅರಣ್ಯ ಶ್ರೀ ವೆಂಕಟೇಶ್ವರಸ್ವಾಮಿಯು ಮಾನವ ಜನಾಂಗಕ್ಕೆ ನೀಡಿದ ಅಮೂಲ್ಯ ವರದಾನ ಈ ಒಂದು ಸೂಕ್ಷ್ಮವೂ ಸುಂದರವೂ ಆದ ಅರಣ್ಯ ಪರಿಸರ ರಕ್ಷಣೆ ಮಾಡಲೆಂದು ತಿರುಮಲೆ ತಿರುಪತಿ ದೇವಸ್ಥಾನಗಳವರು ಉತ್ತಮವಾದ ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆಯನ್ನು ಆರಂಭಿಸಿದ್ದಾರೆ ಈ ಬೃಹತ್ ಅರಣ್ಯ ನಿರ್ಮಾಣೋದ್ಯಮದಲ್ಲಿ ಸಾರ್ವಜನಿಕರು ಭಾಗವಹಿಸಲು ಅಪೂರ್ವ ಅವಕಾಶವುಂಟಾಗಿದೆ ಯೋಜನೆಯ ವಿವರಗಳು ಹೀಗಿವೆ

## ವೃಕ್ಷವರ್ಧಿನಿ - ದಾನದ ಮೊಬಲಗು - ರೂ. 5 ಲಕ್ಷ ಹಾಗೂ ಹೆಚ್ಚು

**ಪ್ರಯೋಜನಗಳು :** 100 ಶತಾಂಶ ಆದಾಯ ತೆರಿಗೆ ವಿನಾಯತಿ ತಿರುಮಲೆಯ ದೆಟ್ಟದಲ್ಲಿ ಒಂದು ಕಡೆ ಒಮ್ಮೆ 2000 ಗಿಡಗಳನ್ನು ನೆಟ್ಟು ಅಂತಹ ವಿಭಾಗಕ್ಕೆ ದಾನಿಗಳ ಅಪೇಕ್ಷೆಯ ಹೆಸರನ್ನಿಟ್ಟು ಐದು ವರ್ಷ ನೋಡಿಕೊಳ್ಳಲಾಗುವುದು ದಾನಿಗಳ ಹೆಸರನ್ನು ದೆಟ್ಟದ ಮೇಲೆ ಪ್ರಧಾನವಾಗಿ ಎದ್ದು ಕಾಣುವಂತೆ ಬರೆದಿಡಲಾಗುವುದು ವರ್ಷದಲ್ಲಿ ಮೂರು ದಿನಗಳು ದಿನಕ್ಕೊಮ್ಮೆಯಂತೆ ಐದು ಮಂದಿಗೆ ಗಣ್ಯದರ್ಶನಾವಕಾಶ ನೀಡಲಾಗುವುದು ಈ ಮೂರು ದಿನಗಳೂ ಅನುಕ್ರಮವಾಗಿರಬೇಕಿಲ್ಲ. ದಾನಿಗೆ ಒಂದು ಬಾರಿ ಉತ್ತರೀಯದ ಬಹುಮಾನ ನೀಡಲಾಗುವುದು ದಾನಿಗೆ ವರ್ಷಕ್ಕೆ ಒಮ್ಮೆ ಹತ್ತು ಕಿರಿಯ ಲಾಡುಗಳನ್ನು ಬಹೂಕರಿಸಲಾಗುವುದು ಎ ಆರ್ ಪಿ ಕೌಂಟರ್ ಅತಿಥಿಗೃಹದಲ್ಲಿ ಐದು ಮಂದಿಗೆ ಮೀರದಂತೆ ಮೂರು ಅನುಕ್ರಮ ದಿನಗಳ ಉಚಿತ ವಸತಿಯನ್ನು ಏರ್ಪಡಿಸಲಾಗುವುದು ಅಥವಾ ಶುಲ್ಕ ಸಹಿತ ಅತಿಗಣ್ಯ ವಸತಿಯನ್ನು ಏರ್ಪಡಿಸಲಾಗುವುದು ಈ ಸೌಲಭ್ಯವನ್ನು ತಿ ತಿ ದೇ ತಿರುಮಲೆಯ ಸ್ವಾಗತಕಚೇರಿಯ ಡೆ ಇ ಓ. ಅವರಿಗೆ ಮೊದಲೇ ಸೂಚನೆ ನೀಡುವುದರಿಂದ ಪಡೆಯಬಹುದಾಗಿದೆ

## ವೃಕ್ಷ ಪ್ರರ್ವರ್ಧಿನಿ - ದಾನದ ಮೊಬಲಗು - 1 ಲಕ್ಷ ರೂ.ಗಳಿಂದ 5 ಲಕ್ಷ ರೂಗಳವರೆಗೆ :

**ಪ್ರಯೋಜನಗಳು :** 100 ಶತಾಂಶ ಆದಾಯಕರ ರಿಯಾಯಿತಿ ತಿರುಮಲೆಯ ದೆಟ್ಟದ ಮೇಲೆ ಒಂದು ಬಾರಿ ಒಂದು ಸಾವಿರ ಗಿಡಗಳನ್ನು ನೆಡಲಾಗುವುದು. ಈ ತರುಸಮೂಹಕ್ಕೆ ದಾನಿಯ ಹೆಸರನ್ನಿಡಲಾಗುವುದು ಐದು ವರ್ಷಗಳ ಕಾಲ ನೋಡಿಕೊಳ್ಳಲಾಗುವುದು ಒಮ್ಮೆ ಮಾತ್ರ ಐದು ಮಂದಿಗೆ ಉಚಿತ ದರ್ಶನಾವಕಾಶ ನೀಡಲಾಗುವುದು

## ವೃಕ್ಷಸಂವರ್ಧನೆ - ದಾನದ ಮೊಬಲಗು - ರೂ. 25,000/- :

**ಪ್ರಯೋಜನಗಳು :** 100 ಶತಾಂಶ ಆದಾಯಕರ ರಿಯಾಯಿತಿ ತಿರುಮಲೆಯಲ್ಲಿ ಐದು ನೂರು ಗಿಡಗಳನ್ನು ನೆಡಲಾಗುವುದು ಈ ತರು ಗುಲ್ಮಕ್ಕೆ ದಾನಿಯ ಹೆಸರನ್ನಿಡಲಾಗುವುದು. ಐದು ವರ್ಷ ಆರೈಕೆ ಮಾಡಲಾಗುವುದು

## ವೃಕ್ಷಪ್ರಸಾದ - ದಾನದ ಮೊಬಲಗು - ರೂ. 15,000/- :

**ಪ್ರಯೋಜನ :** 100 ಶತಾಂಶ ಆಯಕರ ವಿನಾಯತಿ ತಿರುಮಲೆಯಲ್ಲಿ ಪ್ರತಿ ವರ್ಷ ನೂರು ಫಲಪುಷ್ಪ ತರುಗಳನ್ನು ಬೆಳಸಲಾಗುವುದು. ದಾನಿಯ ಹೆಸರಿನಲ್ಲಿ ಪ್ರತಿವರ್ಷ ನೂರು ಹೂ ಹಣ್ಣುಗಿಡಗಳನ್ನು ಯಾತ್ರಿಕರಲ್ಲಿ ಹತ್ತು ವರ್ಷಕಾಲ ವಿತರಿಸಲಾಗುವುದು

## ಸ್ಮಾರಕ ವನಗಳು - ದಾನದ ಮೊಬಲಗು - ರೂ. 5000/- :

**ಪ್ರಯೋಜನಗಳು :** 100 ಶತಾಂಶ ಆದಾಯಕರ ವಿಮುಕ್ತಿ. ತಿರುಮಲೆಯ ದೆಟ್ಟದ ಮೇಲೆ ಹತ್ತು ಸಸಿಗಳನ್ನು ನೆಟ್ಟು ಐದು ವರ್ಷ ಆರೈಕೆ ಮಾಡಲಾಗುವುದು ಈ ಸ್ಥಳದ ಗಿಡಗಳಿಗೆ ದಾನಿಯ ಹೆಸರನ್ನು ಇಡಲಾಗುವುದು

## ವನ ಸಂರಕ್ಷಣ ಭಾಗಸ್ವಾಮ್ಯ - ದಾನದ ಮೊಬಲಗು - ರೂ. 2000/- :

**ಪ್ರಯೋಜನಗಳು :** 100 ಶತಾಂಶ ಆದಾಯ ತೆರಿಗೆ ವಿನಾಯತಿ ತಿರುಮಲೆಯ ಪರ್ವತಾವಳಿಯ ಅರಣ್ಯಾಚ್ಛಾದನೆಯನ್ನು ಅಭಿವೃದ್ಧಿಗೊಳಿಸಲಾಗುವುದು ದಾನಿಯ ಹೆಸರನ್ನು ಪ್ರಧಾನವಾಗಿ ಪ್ರಕಟಿಸಲಾಗುವುದು

**ಅರಣ್ಯ ಸಂರಕ್ಷಣಾಧಿಕಾರಿ,**

ತಿ. ತಿ. ದೇ.

# ನವರಾತ್ರಿ ಬ್ರಹ್ಮೋತ್ಸವ

## 1999 ಅಕ್ಟೋಬರ್ 11 ರಿಂದ ಅಕ್ಟೋಬರ್ 19 ವರೆಗೆ



ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿ ಸ್ವಾಮಿಯ ನವರಾತ್ರಿ ಬ್ರಹ್ಮೋತ್ಸವಗಳನ್ನು ಅಕ್ಟೋಬರ್ 11 ರಿಂದ ಅಕ್ಟೋಬರ್ 19 ರ ವರೆಗೆ ಘನವಾಗಿ ನಡೆಸಲಾಯಿತು ಪ್ರತಿ ಮೂರು ವರ್ಷಕ್ಕೆ ಒಮ್ಮೆ ಅಧಿಕಮಾಸ ಬಂದ ವರುಷದಲ್ಲಿ ಎರಡನೆಯ ಬ್ರಹ್ಮೋತ್ಸವ ನವರಾತ್ರಿಯ ದಿನಗಳಲ್ಲಿ ವಿಜಯದಶಮಿಯಂದು ಚಕ್ರಸ್ನಾನವಾಗುವಂತೆ ಕೊನೆಗೊಳ್ಳುವ ಹಾಗೆ ನಡೆಯುವುದು ಪರಂಪರೆಯಿಂದ ನಡೆದು ಬಂದಿರುವುದಾಗಿದೆ. ಮೊದಲ ಬ್ರಹ್ಮೋತ್ಸವಗಳು ಯಶಸ್ವಿಯಾಗಿ ತಿಂಗಳು ತಿರುಗುವ ಮೊದಲೇ ಮತ್ತೆ ಹತ್ತುದಿನದ ಸಂಭ್ರಮೋತ್ಸವ ನಡೆದು ಯಶಸ್ವಿಯಾಯಿತು ಹಿಂದಿನ ಬ್ರಹ್ಮೋತ್ಸವದಲ್ಲಿ ಸ್ವಾಮಿ ಮೆರವಣಿಗೆ ಬರುವಾಗ, ಹಾದಿಯ ಇಕ್ಕೆಲದಲ್ಲಿ ನಿಂತು ನೋಡಿದ ಭಕ್ತರ ಅನುಕೂಲಕ್ಕೆಂದು ಈಗ ಸಿಮೆಂಟು ಕಾಂಕ್ರೀಟ್‌ಗಳ ಗ್ಯಾಲರಿಗಳನ್ನು ನಿರ್ಮಿಸಲಾಯಿತು. ಈ ಹಿಂದೆ ಭಕ್ತರು ಕುಳಿತು ನೋಡಲು ಮರದ ತತ್ಕಾಲಿಕ ಅಟ್ಟಣಿಗೆಗಳನ್ನು ನಿರ್ಮಿಸಲಾಗುತ್ತಿದ್ದಿತು. ಈಗಲಾದರೊ ಶಾಶ್ವತ ಪ್ರತಿಪಾದನೆಯಾಗಿ ಸಿಮೆಂಟ್ ಮೆಟ್ಟಿಲುಗಳಾಗಿದ್ದು ಯಾತ್ರಿಕರ ಸುರಕ್ಷೆಯನ್ನೂ ಗಮನಿಸಿದಂತಾಗಿದೆ.

ಲೋಕಾಧಿಪತಿಯ ಲೋಕಮೋಹಕ ಉತ್ಸವವನ್ನು ದರ್ಶಿಸಲು ಹೆಚ್ಚಿನ ಜನವನ್ನು ನಿರೀಕ್ಷಿಸಲಾಗಿದ್ದಿತು. ಹೆಚ್ಚಿನ ಅಲಂಕಾರಗಳನ್ನೂ ಮಾಡಲಾಗಿದ್ದಿತು. ಸ್ವಾಮಿಯ ಉತ್ಸವ ದರ್ಶನಾತುರದಲ್ಲಿ ಸೂರ್ಯ ಮುಳುಗುವುದನ್ನು ಮರೆತು ಹೋದನೊ ಎಂಬಂತೆ ತಿರುಮಲೆಯಲ್ಲಿ ರಾತ್ರಿ ಹಗಲು ಒಂದಾಗಿದ್ದವು. ವಿವಿಧ ದೇವತಾಮೂರ್ತಿಗಳು, ವಿಶ್ವರೂಪ, ಇನ್ನೊಂದೆಡೆಗೆ ಗರುಡ ವಾಹನ, ಮತ್ತೊಂದೆಡೆಗೆ ಶಂಖುಚಕ್ರಗಳು, ದೀಪಗಳು ಜಿಗಿ ಜಿಗಿ ಒಡವೆಗಳ ತುಂಬಿದ ಆಕಾಶದಂತೆ ರತ್ನ ಪರಿಶೋಭಿತ ಸಾಗರದಂತೆ ತಿರುಮಲೆಯ ಆಕಾಶವೆಲ್ಲ ವಿದ್ಯುದ್ದೀಪ ಕಾಂತಿಯಿಂದ ತುಂಬಿ ಕತ್ತಲೆ ಹುಡುಕಿದರೂ ಸಿಗದಂತಿತ್ತು. ವೇದಘೋಷ, ಗೋವಿಂದ ನಾಮಘೋಷ, ಭಕ್ತರ ಕೀರ್ತನೆಯ ನಾದಲಹರಿ ಸುತ್ತ ಸಡಗರದ ಸಂಭ್ರಮದ ಉತ್ಸಾಹದ ವಾತಾವರಣದ ನಡುವೆ ಭಕ್ತಾನಂದಕರ ಭಜಕರಘ ಸಂಹರ, ಓವಿ ಬಂದರೆ ತನ್ನ ಬೇರುವ ದೇವರು ಭಕುತರ ನಡುವೆ ಬರುತ್ತಿದ್ದಾಗ ಉಘೇ ಉಘೇ ನಾದ ಆಕಾಶವನ್ನು ಆಕ್ರಮಿಸಿ ಸ್ವಾಮಿಯ ಕೀರ್ತಿಯನ್ನು ಸಾವಿರ ದಿಕ್ಕುಗಳಲ್ಲಿ ಮೂಲೆಗಳಲ್ಲಿ ಹರಡುವಂತೆ ಮಾಡಿತು.

ನವರಾತ್ರಿ ಬ್ರಹ್ಮೋತ್ಸವಗಳಲ್ಲಿ ಮಾಮೂಲಿನಂತೆ ನಡೆಯುವ ಧ್ವಜಾರೋಹಣವಿರದು. ಹಿಂದಿನ ದಿನ ರಾತ್ರಿ ವಿಷ್ವಕ್ಸೇನರು ತಿರುವೀಧಿಗಳಲ್ಲಿ ಯಾಗಶಾಲೆಯ ಮೃತ್ ಸಂಗ್ರಹಣ ನಡೆಸಿ, ಬ್ರಹ್ಮೋತ್ಸವದ ಅಂಕರಾರ್ಪಣೆ ಮಾಡುವ ಕಾರ್ಯಕ್ರಮ ಯಥಾಪ್ರಕಾರ ನಡೆ



ಯಿತು. ಅಕ್ಟೋಬರ್ 11 ಸೋಮವಾರ ಬೆಳಗ್ಗೆ ಬಂಗಾರದ ತಿರುಚ್ಚಿಯಲ್ಲಿ - ತಿರುಶಿಬಿಕೆಯಲ್ಲಿ - ಸ್ವಾಮಿ ದರ್ಶನವಿತ್ತರು ಸ್ವಾಮಿಯ ತಿರುವೀಧಿ ಮೆರವಣಿಗೆಯಲ್ಲಿ ಅಶ್ವ, ಗಜದಳಗಳು, ಗೋ ಸಮೂಹ, ಮಂಗಳ ವಾದ್ಯಗಳು, ಕೋಲಾಟ, ಭಜನ ಬೃಂದಗಳು ವೇದಘೋಷ, ಪಾಶುರ ಪಾರಕರುಗಳು ನಡೆದಿರಲು ಜನ ವ್ಯವಸ್ಥಿತವಾಗಿ ಇಕ್ಕೆಲಗಳಲ್ಲಿ ಸಾಲುಗಟ್ಟಿ, ಸರದಿಗಟ್ಟಿ ಆರಾಧಿಸಿ ಆರತಿಯನ್ನು ಏರ್ಪಡಿಸಲಾಗಿದ್ದಿತು ರಾತ್ರಿ ಸ್ವಾಮಿ ದೊಡ್ಡ ಶೇಷವಾಹನದಲ್ಲಿ ಊರ ಮೆರವಣಿಗೆಯಲ್ಲಿ ಆಗಮಿಸಿದರು ಊಂಜಲ್ ಮಂಟಪದಲ್ಲಿ ಉಭಯ ನಾಚ್ಚಿಯಾರರೊಂದಿಗೆ ಉಯ್ಯಾಲೆಯಲ್ಲಿ ತೂಗಿಸಲಾಯಿತು ಸಂಕೀರ್ತನ ಸಮರ್ಪಣೆಯಾದಮೇಲೆ ಮೆರವಣಿಗೆ ನಡೆಯಿತು.

ಅಕ್ಟೋಬರ್ 12 ರಂದು ಮಂಗಳವಾರ ಬೆಳಗ್ಗೆ ಚಿಕ್ಕಶೇಷವಾಹನದಲ್ಲಿಯೂ ರಾತ್ರಿ ಹಂಸವಾಹನದಲ್ಲಿಯೂ ಆಲಯದಿಂದ ಹೊರಬಂದ ಸ್ವಾಮಿ ಸರ್ವರನ್ನೂ ಅನುಗ್ರಹಿಸಿದರು ಅಕ್ಟೋಬರ್ 13 ರಂದು ಉದಯ ಕಾಲದಲ್ಲಿ ಸಿಂಹವಾಹನವನ್ನೇರಿ ಬಂದ ಸ್ವಾಮಿ ಅಂದು ರಾತ್ರಿ ಮುತ್ತಿನ ಚಪ್ಪರದಲ್ಲಿ ಉಭಯ ನಾಯಕಿಯರೊಡನೆ ಹೊರಬಂದರು ನವನೀತ ಚೋರನ ವೇಷ ಧರಿಸಿದ ಕೃಷ್ಣ ಏಣಿಯನ್ನೇರುವಂತೆ ಅಲಂಕರಿಸಲಾಗಿದ್ದಿತು

ಅಕ್ಟೋಬರ್ 14 ರಂದು ಬೆಳಗ್ಗೆ ಕಲ್ಪ ವೃಕ್ಷವಾಹನದಲ್ಲಿ ಸ್ವಾಮಿ ಉಭಯ ನಾಯಕಿಯರೊಡನೆ ವೇಣುಗೋಪಾಲನ ವೇಷದಲ್ಲಿ ಹಸು ಕರುಗಳೊಡನೆ ಊರ ಮೆರವಣಿಗೆಯಲ್ಲಿ ಹೊರಬಂದರು ಅಂದು ಸಂಜೆ ಸರ್ವಭೂ ಪಾಲವಾಹನದಲ್ಲಿ ಸ್ವಾಮಿಯೂ ಉಭಯ ನಾಯಕಿಯರೂ ಸೀತಾ ರಾಮಲಕ್ಷ್ಮಣರಂತೆ ಅಲಂಕೃತರಾಗಿ ಮೆರವಣಿಗೆಯಲ್ಲಿ ಬಂದದ್ದು-ಜನ ಆನಂದದಿಂದಲೂ ಆಶ್ಚರ್ಯದಿಂದಲೂ ಮೂಕಮುಗ್ಧವಾಗುವಂತಿದ್ದಿತು

ಅಕ್ಟೋಬರ್ 15 ರಂದು ಬೆಳಗ್ಗೆ ಸ್ವಾಮಿ ಮೋಹಿನೀ ಅವತಾರದಲ್ಲಿ ಊರ ಮೆರವಣಿಗೆಯಲ್ಲಿ ಹೊರಬಂದರು ಪಲ್ಲಕ್ಕಿಯಲ್ಲಿ ಮೋಹಿನೀ ಅವತಾರ ಮುಂದೆ ಬರುತ್ತಿರುವಂತೆಯೇ ಹಿಂದೆ ಇನ್ನೊಂದು ಪಲ್ಲಕ್ಕಿಯಲ್ಲಿ ಶ್ರೀಕೃಷ್ಣಸ್ವಾಮಿಯೂ ಹೊರಬಂದು ಜನ ಮಾನಸವನ್ನು ತಣಿಸಿದ್ದು ಇಲ್ಲಿನ ವಿಶೇಷ ಅಂದು ಸಂಜೆ ಗರುಡಸೇವೆ ಆಲಯದ ಒಳಗಿನ ಮೂಲಮೂರ್ತಿಗೆ ಅಲಂಕರಿಸಲಾದ ಲಕ್ಷ್ಮೀಹಾರ, ಸಹಸ್ರನಾಮಹಾರ ಮೊದಲಾದ ಅನರ್ಘ್ಯವಾದ ಅಲಂಕಾರಗಳನ್ನು ಉತ್ಸವ ಮೂರ್ತಿಗೆ ಅಲಂಕರಿಸಿ ಗರುಡವಾಹನದಲ್ಲಿ ಕರೆತರಲಾಯಿತು ಅಂದು ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್ ಚಂದ್ರಬಾಬುನಾಯುಡು ಅವರು ಕುಟುಂಬ ಸಮೇತರಾಗಿ ತಿರುಮಲೆಗೆ ಆಗಮಿಸಿ ಸ್ವಾಮಿಯ ಆರಾಧನೆಯಲ್ಲಿ ಪಾಲುಗೊಂಡರು ಬಾಂಬಿನೋ ಸಂಸ್ಥೆ ಅಂದು ಒಂದು ದಿನದಲ್ಲಿಯೇ ತಿರುಮಲೆಯ ಆಲಯಕ್ಕೆ ಆಗಮಿಸಿದ ಯಾತ್ರಿಕರ ಲಘು ಉಪಹಾರಕ್ಕಾಗಿ ಇಪ್ಪತ್ತೈದು ಸಾವಿರ ಆಹಾರದ ಪೊಟ್ಟಣಗಳನ್ನು ವಿತರಿಸಿದರು ತಿರುಮಲೆಯ ತಿರುವೀಧಿಗಳ ತುಂಬ ಜನತುಂಬಿ ಗರುಡ ವಾಹನನಾದ ಸ್ವಾಮಿಯನ್ನು ಜಯಜಯ ಕಾರಗಳೊಡನೆ ಸ್ವಾಗತಿಸಿ, ನಮನ ಸಲ್ಲಿಸಿದರು

ಹದಿನಾರರಂದು ಬೆಳಗ್ಗೆ ಹನುಮಂತ ವಾಹನನಾದ ಸ್ವಾಮಿ ಊರ ಮೆರವಣಿಗೆಯಲ್ಲಿ ಹೊರಬಂದು ಭಕ್ತರ ಆದ್ಯತೆಯ ಆದರಕ್ಕೆ ಆರಾಧನೆಗೆ ವಸ್ತುವಾಗಿ, ಆನಂದಕ್ಕೆ ತೃಪ್ತಿಗೆ, ಕಾರಣನಾಗಿ "ಅಭಯಂ ಸರ್ವ ಭೂತೇಭ್ಯೋ ದದಾಮ್ಯೇತತ್ ವ್ರತಂ ಮಮ" - ಎಂದು ಮತ್ತೊಮ್ಮೆ ಹೇಳ ಬಂದಿರುವನೋ ಎಂಬಂತೆ ಕಂಡುಬಂದ

ಅಂದು ಮಧ್ಯಾಹ್ನ ವಸಂತೋತ್ಸವ ಸಾಮಾನ್ಯವಾಗಿ ವಸಂತೋತ್ಸವದ ನಂತರ ಇತರ ಬ್ರಹ್ಮೋತ್ಸವಗಳಲ್ಲಿ ಸ್ವರ್ಣರಥ ಹೊರಡುವುದು. ಆದರಿಲ್ಲಿ ಅಧಿಕ ಮಾಸದ ಬ್ರಹ್ಮೋತ್ಸವ





ದಲ್ಲಿ ದಾರು ರಥದ ಬದಲಿಗೆ ರಜತರಥವನ್ನು — ರಥೋತ್ಸವದ ದಿನಗಳಲ್ಲಿ ಉಪಯೋಗಿಸುವುದುಂಟಾಗಿ, ಈಗ ಸ್ವರ್ಣರಥವು ರಜತ ರಥದ ಸ್ಥಳದಲ್ಲಿ ಬಳಕೆಯಾಗುವುದು ಹೀಗಾಗಿ ವಸಂತೋತ್ಸವದ ದಿನದಂದು ಸ್ವಾಮಿಯ ಮೆರವಣಿಗೆಗೆ ಪುಷ್ಪಕ ವಿಮಾನವೆಂಬ ಮತ್ತೊಂದು ಆಕರ್ಷಕ ವಾಹನವನ್ನು ಈಚೆಗೆ ಬಳಸಲಾಗುತ್ತಿದೆ. ಶ್ರೀರಂಗಕ್ಕೆ ಸೇರಿದ ಶ್ರೀ ರಂಗರಾಜನ್ ಅವರು ತಮ್ಮ ಸಹ ಕಲಾವಿದರೊಡನೆ ಸೇರಿ ನಿರ್ಮಿಸಿ ನೀಡುವ ಈ ಪುಷ್ಪಕ ವಿಮಾನಕ್ಕೆ ತಗುಲುವ ಖರ್ಚು ವೆಚ್ಚಗಳನ್ನು ಮದರಾಸಿಗೆ ಸೇರಿದ ಉಡುಪಿ ಹೋಟೆಲಿನ ಶ್ರೀ ರಾಮಪ್ರಸಾದ್ ಅವರು ನೋಡಿಕೊಳ್ಳುವಂತಾಗಿದ್ದು ಈ ರೀತಿಯ ಪುಷ್ಪಕ ವಿಮಾನದಲ್ಲಿ ಸ್ವಾಮಿಯು ಗೋವರ್ಧನ ಗಿರಿಧಾರಿಯ ರೂಪದಲ್ಲಿ ಉಭಯ ನಾಯಕಿಯರೊಡನೆ ಮೆರವಣಿಗೆಯಲ್ಲಿ ಬಹು ಸಂತಸಕರವಾಗಿ ನಡೆದರು

ಅಂದು ರಾತ್ರಿ ಗಜವಾಹನದಲ್ಲಿ ಸ್ವಾಮಿ ಊರ ಮೆರವಣಿಗೆಯಲ್ಲಿ ಬಂದದ್ದು ಜನಮಾನಸವನ್ನು ಪ್ರವೇಶಿಸುವಂತಿದ್ದಿತು

— 17 ನೇ ತಾರೀಖಿನಂದು ಸೂರ್ಯಪ್ರಭ, ಚಂದ್ರಪ್ರಭವಾದನಗಳಲ್ಲಿ ಸ್ವಾಮಿ ಮೆರವಣಿಗೆಯಾಯಿತು ಬೆಳಗ್ಗೆ ಸೂರ್ಯಪ್ರಭವಾಹನದಲ್ಲಿ ಉಭಯ ನಾಚ್ಚಿಯಾರರೊಡನೆ ಅಲಂಕೃತನಾಗಿ ಸ್ವಾಮಿ ಹೊರಬಂದರೆ ಸಂಜೆ ಚಂದ್ರಪ್ರಭವಾಹನದಲ್ಲಿ ಹೊರಬಂದರು ಅಂದು ತಿ ತಿ ದೇ ಪ್ರಕಟನೆಯಾದ 2000 ನೇ ವರ್ಷದ ದಿನಸೂಚಿಯನ್ನು 'ಡೈರಿ - 2000' ವನ್ನು ಕಾರ್ಯನಿರ್ವಹಣಾಧಿಕಾರಿಗಳು ಬಿಡುಗಡೆ ಮಾಡಿದರು.

18 ರಂದು ಬೆಳಗ್ಗೆ ಕನಕರಥದಲ್ಲಿ ಸ್ವಾಮಿಯ ಸುತ್ತಾಟ. ತಿರುಮಲೆಯ ತಿರುವೀಧಿಗಳಲ್ಲಿಯೂ, ರಸ್ತೆ ಬದಿಯ ಮನೆ, ಮಹಡಿ, ಕಾಲುಹಾದಿ, ಜಗಲಿ, ಅಟ್ಟಣೆ, ಗೋಡೆ, ಎಂಬ ವ್ಯತ್ಯಾಸ ತಿಳಿಯದೆ ಜನ ಕಾದು ನಿಂತು ಸ್ವಾಮಿಯ ದರುಶನ ಪಡೆದರು

18-10-99 ರಂದು ಸಂಜೆ ಅಶ್ವವಾಹನದಲ್ಲಿ ಸ್ವಾಮಿಯ ಊರ ಮೆರವಣಿಗೆಯಾಯಿತು

— ಭಾರತದ ಉಪರಾಷ್ಟ್ರಪತಿ ಶ್ರೀಕೃಷ್ಣಕಾಂತ್ ಅವರು ಕುಟುಂಬ ಸಹಿತರಾಗಿ ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ದರ್ಶಿಸಿ ಆರಾಧಿಸಿದರು. ಅವರನ್ನು ಆಲಯ ಸಂಪ್ರದಾಯದಂತೆ ಮಹಾದ್ವಾರದಲ್ಲಿ ಸ್ವಾಗತಿಸಲಾಯಿತು. ದರ್ಶನಾನಂತರ ರಂಗನಾಯಕ ಮಂಟಪದಲ್ಲಿ ಉಪರಾಷ್ಟ್ರಪತಿ ದಂಪತಿಗಳಿಗೆ ವೇದಾಶೀರ್ವಚನ ನೀಡಲಾಯಿತು ಕಾರ್ಯನಿರ್ವಹಣಾಧಿಕಾರಿ ಡಾ|| ಐ. ವಿ. ಸುಬ್ಬಾರಾವ್ ಅವರು ಶ್ರೀಯುತರಿಗೆ ಸ್ವಾಮಿಯ ಪ್ರಸಾದಗಳನ್ನು ನೀಡಿದರು

19-10-99 ರಂದು ಬೆಳಗ್ಗೆ ಚಕ್ರಸ್ನಾನ. ತಿರುಮಲೆಯ ಆಲಯದ ಬದಿಯ ಸ್ವಾಮಿ ಪುಷ್ಕರಿಣಿಯಲ್ಲಿ ಶ್ರೀ ವರಾಹಸ್ವಾಮಿ ದೇವಾಲಯದ ಎದುರಿಗೆ ಸ್ವಾಮಿಯ ಪ್ರತಿನಿಧಿಯಾದ ಸುದರ್ಶನ ಚಕ್ರಕ್ಕೆ ತೀರ್ಥವಾರಿಯನ್ನು ಏರ್ಪಡಿಸಲಾಗಿದ್ದಿತು. ಶ್ರೀ ವೆಂಕಟೇಶ್ವರಸ್ವಾಮಿಯ ಹಾಗೂ ಉಭಯ ನಾಯಕಿಯರ ತಿರುಮಂಜನವಾದ ಬಳಿಕ ನಡೆದ ಚಕ್ರಸ್ನಾನದಲ್ಲಿ ಪುಷ್ಕರಿಣಿಯ ನೀರು ಕಾಣಿಸದಷ್ಟು ಜನ ನೆರೆದು ತೀರ್ಥಸ್ನಾನ ಮಾಡಿದರು.



ದೆಟ್ಟದ ಮೇಲೆ ಅರಣ್ಯ ಇಲಾಖೆಯವರಿಂದ ಏರ್ಪಾಡಾದ ಶ್ರೀನಿವಾಸ ಉದ್ಯಾನವನವನ್ನು ಆಂಧ್ರಪ್ರದೇಶದ ಸರ್ಕಾರದ ರೆವಿನ್ಯೂ ಶಾಖೆಯ ಮುಖ್ಯ ಕಾರ್ಯದರ್ಶಿ ಶ್ರೀ ರಾಮಬಾಬು ಅವರು ಉದ್ಘಾಟಿಸಿದರು.

ತಿ. ತಿ. ದೇವಸ್ಥಾನಗಳ ಅಂಕಿತಭಾವನೆಯ ಸೇವೆಯಿಂದಾಗಿ ಭಕ್ತರಿಗೆ ಉತ್ತಮ ಗುಣಮಟ್ಟದ ಸೇವೆ ದೊರೆತಂತೆ ಆಯಿತೆಂದು ವರದಿಯಾಗಿದೆ ಒಂಬತ್ತು ದಿನಗಳ ಕಾಲ ನಡೆದ ಈ ಉತ್ಸವಗಳಲ್ಲಿ 5 ಲಕ್ಷಕ್ಕಿಂತ ಹೆಚ್ಚು ಮಂದಿ ಸ್ವಾಮಿಯನ್ನು ದರ್ಶಿಸಿದರು. ಹುಂಡಿಯ ಮೂಲಕ 3, 11, 94, 298 ರೂಗಳೂ ಆರ್ಜಿತಸೇವೆಯ ಮೂಲಕ 91, 80, 530 ರೂಗಳೂ, ಪ್ರಸಾದಗಳ ಮಾರಾಟದಿಂದ 59, 98, 197 ರೂಗಳೂ ಆದಾಯವಾಯಿತು ಈ ಬಾರಿಯ ಬ್ರಹ್ಮೋತ್ಸವಗಳಲ್ಲಿ 1, 57, 510 ಮಂದಿ ತಮ್ಮ ತಲೆಗೂದಲನ್ನು ಅರ್ಪಿಸಿದರು 2, 44, 820 ಮಂದಿ ಉಚಿತ ದೋಜನಾವಕಾಶವನ್ನು ಪಡೆದರು 3, 10,000 ಚಿಕ್ಕ ಲಾಡುಗಳನ್ನು ಉಚಿತವಾಗಿ ಹಂಚಲಾಯಿತು.



ಯಾತ್ರಿಕರಿಗೆ ಸ್ವಾಮಿಯ ದರ್ಶನದ ಸಮಯವನ್ನು ತಿಳಿಸುತ್ತ, ಅವರು ಸರದಿಯ ಸಾಲಿನ ಕೋಣೆಗಳಲ್ಲಿ ಕಾದು ಕುಳಿತಿರುವುದನ್ನು ತಪ್ಪಿಸುವ ಹಾಗೂ ದರ್ಶನಸೂಚನೆಯ ಸಮಯಕ್ಕೆ ಸರಿಯಾಗಿ ನಡೆಯುವ ಸಾಲಿನಲ್ಲಿ ಸೇರಿಸುವ ಸುದರ್ಶನ ಟೋಕನ್ ವ್ಯವಸ್ಥೆಯನ್ನು ತಿ.ತಿ ದೇ ಈಚೆಗೆ ಪ್ರವೇಶ ಪಡಿಸಿದ್ದು ಇದು ಜನಪ್ರಿಯವಾಗುತ್ತಿದೆ. ಈ ಬ್ರಹ್ಮೋತ್ಸವ ಕಾಲದಲ್ಲಿ 54929 ಮಂದಿ ವೈಕುಂಠಂ ಕ್ಯೂಕಾಂಪ್ಲೆಕ್ಸ್ ಮೂಲಕವೂ 1,00,199 ಮಂದಿ ಪಿ ಪಿ.ಸಿ. ಷೆಡ್‌ಗಳ ಮೂಲಕವೂ ಸುದರ್ಶನ ಟೋಕನ್ ಮೂಲಕ ಸ್ವಾಮಿ ದರ್ಶನವನ್ನು ಪಡೆದರು.

ಎನ್ ಎಸ್ ಎಸ್ ವಿದ್ಯಾರ್ಥಿಗಳೂ, ಸ್ಕೌಟ್ ವಿದ್ಯಾರ್ಥಿಗಳೂ ಹೆಚ್ಚಿನ ಸೇವೆಯನ್ನು ಒದಗಿಸಿದ್ದರು. ಹೆಚ್ಚಿನ ಪೋಲೀಸು ಸಿಬ್ಬಂದಿಯ ಏರ್ಪಾಡುಗಳೂ ಆಗಿದ್ದವು. ತಿರುಮಲೆಯ ಶೇಷಾದ್ರಿ ನಗರದ ಉದ್ಯಾನವನದಲ್ಲಿ ಅರಣ್ಯ ಇಲಾಖೆಯ ವತಿಯಿಂದ ಪ್ರದರ್ಶನ, ಫಲಪುಷ್ಪ ಪ್ರದರ್ಶನಗಳು ಎಂದಿನಂತೆ ಆಕರ್ಷಣೆಯ ಉಪ ಕೇಂದ್ರಗಳಾಗಿದ್ದವು. ಮುಖ್ಯಕೇಂದ್ರ ನಿತ್ಯನಿರಂತರವಾಗಿ ಶ್ರೀ ವೆಂಕಟೇಶ್ವರಸ್ವಾಮಿ ಎಂಬುದನ್ನು ಬೇರೆಯಾಗಿ ಹೇಳಬೇಕಿಲ್ಲ.

ಸ್ವಾಮಿಯ ಬ್ರಹ್ಮೋತ್ಸವಗಳಲ್ಲಿ ಎಂದಿನಂತೆ ಧಾರ್ಮಿಕ ಪುಸ್ತಕಗಳ ಪ್ರದರ್ಶನ ಮಾರಾಟಗಳನ್ನು ಏರ್ಪಡಿಸಲಾಗಿದ್ದಿತು. ತಿರುಮಲೆಯ ಎ.ಟಿ.ಸಿ ವಿಚಾರಣಾಕೇಂದ್ರ, ವೈಭವ ಮಂಟಪ, ಕಲ್ಯಾಣಕಟ್ಟೆಯ ಬದಿಗಳಲ್ಲಿಯೂ, ತಿರುಪತಿಯ ಆರ್.ಟಿ.ಸಿ. ನಿಲ್ದಾಣದಲ್ಲಿಯೂ ಏರ್ಪಾಡಾಗಿದ್ದ ಈ ಪುಸ್ತಕದಂಗಡಿಗಳಲ್ಲಿ ಮಾರಾಟವಾದ ಒಟ್ಟು ಸರಕಿನ ಮುಖಬೆಲೆ (ರಿಯಾಯಿತಿಗಳ ಹೊರತು) 1,90,000 ರೂಪಾಯಿಗಳು. ಇಲ್ಲಿ ತಿ. ತಿ. ದೇವಸ್ಥಾನಗಳ ಆರ್ಥಿಕ ನೆರವಿನಿಂದ ಪ್ರಕಟವಾದ ಪುಸ್ತಕಗಳನ್ನೂ ರಿಯಾಯಿತಿ ದರದಲ್ಲಿ ಮಾರಲಾಯಿತು.





# ಬ್ರಹ್ಮೋತ್ಸವದಲ್ಲಿ ದಾಸಸಾಹಿತ್ಯ

ತಿರುಪತಿ ತಿಮ್ಮಪ್ಪನಿಗೂ ಕನ್ನಡದ ಹರಿದಾಸರಿಗೂ ಹತ್ತಿರದ ನಂಟು. ಹರಿಯ ಹಿರಿಮೆಯನ್ನು ಹಾಡುವುದೇ ನಿತ್ಯವೃತ್ತಿಯಾಗಿ, ಜೀವನಧ್ಯೇಯವಾಗಿ ನಡೆದ ಹರಿದಾಸರೆಲ್ಲ ಕಾಲದಿಂದ ಕಾಲಕ್ಕೆ ತಿರುಪತಿಯ ಶ್ರೀನಿವಾಸನನ್ನು ಮನಸಾರೆ ನೋಡಬಯಸಿದ್ದು, ಅವರ ಕೀರ್ತನೆಗಳಲ್ಲೇ ದಾಖಲೆಯಾಗಿ ಸಾಮಾನ್ಯರ ಹೃದಯಾಭಿಲಾಶೆಗೆ ಕೊರಳು ಕೊಟ್ಟಂತೆ ಕಂಡುಬರುತ್ತದೆಯಾಗಿ, ಇತಿಹಾಸದುದ್ದಕ್ಕೂ ಕನ್ನಡಿಗರು, ಕನ್ನಡ ವಾಗ್ಗೇಯಕಾರರು, ಕರ್ನಾಟಕ ಹರಿದಾಸರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ನೋಡಲು, ಹಾಡಲು, ದೂರದೂರುಗಳಿಂದ ಅಯಸ್ಕಾಂತದತ್ತ ಆಕರ್ಷಿತವಾಗುವ ಕಬ್ಬಿಣದಂತೆ ತಾಯಿಯತ್ತ ತೆವಳುವ ಮಗುವಿನಂತೆ, ಹಸುವಿನತ್ತ ನಡೆಯುವ ಕರುವಿನಂತೆ ತಿರುಪತಿಯ ಹಾದಿಯನ್ನು ಕ್ರಮಿಸ ತೊಡಗಿದ್ದು ಸಹಜವೇ. ಕನ್ನಡ ಹರಿದಾಸರಿಗೆ, ಕನ್ನಡದ ಭಕ್ತರಿಗೆ ಪಂಡರಪುರದ ಪಾಂಡುರಂಗನೂ, ಉಡುಪಿಯ ಶ್ರೀಕೃಷ್ಣನೂ, ತಿರುಪತಿಯ ವೆಂಕಟೇಶನೂ ಭಕ್ತಿಯ ತ್ರಿಕೋನವಾಗಿ ಅನುಕ್ರಮವಾಗಿ ನಾದಬ್ರಹ್ಮ ಅನ್ನಬ್ರಹ್ಮ ಕಾಂಚನಬ್ರಹ್ಮರಂತೆ ಆಕರ್ಷಿಸತೊಡಗಿದರು.

ತಿರುಪತಿಯ ಶ್ರೀನಿವಾಸ ನಿತ್ಯಕಲ್ಯಾಣ ಪಚ್ಚತೋರಣದ ಸ್ವಾಮಿ ನಿತ್ಯೋತ್ಸವ, ವಾರೋತ್ಸವ, ಪಕ್ಷೋತ್ಸವ, ಮಾಸೋತ್ಸವ, ಸಂವತ್ಸರೋತ್ಸವಗಳ ನಡುವೆ ನಿತ್ಯವೂ ತಿರುಮಲೆಯಲ್ಲಿ ಸಡಗರವೇ. ಕಲಿಯುಗದಲ್ಲಿನ ಸಾಕ್ಷಾತ್ ದೈವ ಶ್ರೀನಿವಾಸನೆಂದ ಮೇಲೆ ಅವನನ್ನು ನೋಡಬರುವ ಭಕ್ತರಿಗೇನು ಕೊರತೆ. ದೇರೆ ಎಲ್ಲೂ ಇಲ್ಲದಷ್ಟು ಜನ ಇಲ್ಲಿಗೆ ದಿನವೂ ಬರುತ್ತಾರೆ ಎಂಬುದಷ್ಟೇ ಅಲ್ಲ ಉತ್ಸವಗಳಲ್ಲಿ ಹಿರಿದಾದ, ದೀರ್ಘವಾದ, ಬ್ರಹ್ಮೋತ್ಸವಗಳಲ್ಲಿ ಸಾಧಾರಣಕ್ಕಿಂತ ಹೆಚ್ಚು ಮಂದಿ ಬರುವರೆಂಬುದು ಸ್ಪಷ್ಟವೇ ಇದೆ. ಭಕುತ ಜನ ಮುಂದೆ ನಡೆದಿರಲು ಭಗವಂತ ಹಿಂದೆ ನಡೆಯುತ್ತ ತಿರುವೀಧಿಗಳಲ್ಲಿ ಮೆರವಣಿಗೆಯಲ್ಲಿ ಬರುತ್ತಿರುವ ದೃಶ್ಯವೂ ಕಾಲದಿಂದ ಭಕ್ತರಿಗೆ ಕನ್ನಡಿಗರಿಗೆ ಆಪ್ಯಾಯಮಾನವಾದದ್ದೇ ಹೌದು. ಅಷ್ಟಲ್ಲದೇ ಹೇಳುತ್ತಾರೆಯೇ ವಿಜಯದಾಸರು 'ನಿನ್ನ ಭಕ್ತರ ನೋಡಲು ಬಂದೆನಲ್ಲದೆ



# ವಾರ್ಷಿಕ ಬ್ರಹ್ಮೋತ್ಸವದಲ್ಲಿ ಭಾಗವಹಿಸಿದ ಭಜನ ಮಂಡಳಿಗಳು

## 12-9-99 ರಿಂದ 18-9-99

1. ಮಹಾಲಕ್ಷ್ಮಿ ಭಜನ ಮಂಡಳಿ, ಕೊಲ್ಲಾಪುರ.
2 ಶ್ರೀನಿಧಿ ಭಜನ ಮಂಡಳಿ, ಬೆಂಗಳೂರು
3 ಮಾಧ್ವ ಭಜನ ಮಂಡಳಿ, ಭದ್ರಾವತಿ.
4 ಶ್ರೀ ವ್ಯಾಸರಾಜ ಭಜನ ಮಂಡಳಿ, ಸೂಳೂರುಪೇಟೆ
5. ಹರಿಪ್ರಿಯ ಭಜನ ಮಂಡಳಿ, ತುಮಕೂರು.
6 ಶ್ರೀರಂಗವಿಠಲ ಭಜನ ಮಂಡಳಿ, ಶ್ರೀರಂಗಂ
7 ಶ್ರೀರಾಜ ರಾಜೇಶ್ವರಿ ಭಜನ ಮಂಡಳಿ, ನೆಲ್ಲೂರು
8 ಬಲಭೀಮಸೇನ ಭಜನ ಮಂಡಳಿ, ಗುಲ್ಬರ್ಗ.
9. ಶ್ರೀ ಗುರುಮಧ್ವ ಸೇವಾಸಮಿತಿ, ಅನಂತಪುರಂ
10. ಶ್ರೀಲಕ್ಷ್ಮೀನರಸಿಂಹ ಭಜನ ಮಂಡಳಿ, ಮೈಸೂರು.
11. ಬಾಲಾಜಿ ಭಜನ ಮಂಡಳಿ, ಗಂಗಾವತಿ.
12. ಅ.ಭಾ.ಮಾ. ಮಹಿಳಾಶಾಖೆ, ಹೈದರಾಬಾದ್.
13. ಶ್ರೀಲಕ್ಷ್ಮೀ ನರಸಿಂಹ ಭಜನ ಮಂಡಳಿ, ಗುಂಟೂರು.
14 ಪರಿಮಳ ಭಜನ ಮಂಡಳಿ, ಡೊಂಬಿವಲಿ.
15. ಭದ್ರಾದ್ರಿ ಶ್ರೀರಾಮ ಭಜನ ಮಂಡಳಿ, ರಾಜಮಂಡ್ರಿ.
16. ಮಹಾಗಣಪತಿ ಭಜನ ಮಂಡಳಿ, ಉಡುಪಿ.
17. ಶ್ರೀ ಗುರುಜಗನ್ನಾಥದಾಸ ಭಜನಾಮಂಡಳಿ, ಗಜೇಂದ್ರಗಢ.
18. ಪುರಂದರದಾಸ ಸಂಘ - ಚೆನ್ನೈ.
19 ಲಕ್ಷ್ಮೀ ಶೋಭಾನೆ ಭಜನೆ ಮಂಡಳಿ, ಅನಂತಪುರ.
20 ಹರೇಕೃಷ್ಣ ಭಜನ ಮಂಡಳಿ, ಮೈಸೂರು.
21 ಸುಧಾ ಭಜನ ಮಂಡಳಿ, ನಿಪ್ಪಾಣಿ.
22. ಭಾರತೀಶ ಭಜನ ಮಂಡಳಿ, ಬೆಂಗಳೂರು
23 ಶ್ರೀ ಸತ್ಯಸಂಧ ತೀರ್ಥ ಭಜನ ಮಂಡಳಿ, ವಿಜಯವಾಡ



ಉಪನ್ಯಾಸ ಮಾಡುತ್ತಾ
ದಾಸಸಾಹಿತ್ಯ ಪ್ರಾಜೆಕ್ಟ್ ವಿಶೇಷಾಧಿಕಾರಿ
ಶ್ರೀ ಕೆ ಅಪ್ಪಣ್ಣಾಚಾರ್ಯ

ನಿನ್ನ ನೋಡಲು ಬಂದೆನೇ ಸ್ವಾಮಿ?' ಎಲ್ಲಕಡೆ ಇರುವ ಅವನನ್ನು ನೋಡಲು ಬೆಟ್ಟಕ್ಕೇಕೆ ಬರ ಬೇಕು ಎಂಬುದು ಅವರ ಪ್ರಶ್ನೆ.

ತಿ. ತಿ. ದೇವಸ್ಥಾನಗಳ ದಾಸಸಾಹಿತ್ಯ ಪ್ರಾಜೆಕ್ಟ್ ಒಂದು ವಿಶಿಷ್ಟರೀತಿಯ ಸಂಸ್ಥೆ. ಇತರ ಧಾರ್ಮಿಕ ಸಂಘಟನೆಗಳಂತೆ ಧಾರ್ಮಿಕ ಸಾಹಿತ್ಯ ಪ್ರಕಟನೆ, ಪ್ರಚಾರಗಳ ಪರಿಧಿಯಲ್ಲಿಯೂ ಕೆಲಸ ನಿರ್ವಹಿಸುವುದರೊಂದಿಗೇ ಭಕ್ತ ಸಂಘಟನೆ, ಭಾಗವತಸೇವೆಗಳ ದಿಕ್ಕಿನಲ್ಲಿಯೂ ಕೆಲಸ ಮಾಡುತ್ತಿದೆ ಅದರ ಭಕ್ತಜನ ಸಮುದಾಯದ ಸಂಘಟನೆಯಲ್ಲಿ ನೊಂದಾಯಿತವಾಗಿರುವ ನೂರಾರು ಭಜನ ಸಂಘಗಳು ದೇಶಾದ್ಯಂತ ಹರಡಿವೆ ಕರ್ನಾಟಕದಲ್ಲಿ ಮಾತ್ರವೇ ಅಲ್ಲದೆ ತಮಿಳುನಾಡು, ಆಂಧ್ರಪ್ರದೇಶ ಮಹಾರಾಷ್ಟ್ರಗಳಿಂದಲೂ ಕನ್ನಡ ಹರಿದಾಸರ ಕೀರ್ತನೆಗಳನ್ನು ಹಾಡಿ ಹರಿಯ ಸ್ತುತಿ ಮಾಡುವ ಈ ಭಜನ ಸಂಘಗಳು ತಿರುಪತಿಯ ಬ್ರಹ್ಮೋತ್ಸವಗಳಲ್ಲಿ ಭಾಗವಹಿಸುವ ಛಂದವನ್ನು ನೆನೆಯುವುದೂ ಒಂದು ಸುಖಕರವಾದ ಅನುಭವವೇ

ಆಯ್ದ ಭಜನ ಸಂಘಗಳು ಈ ಬಾರಿಯ ಎರಡೂ ಬ್ರಹ್ಮೋತ್ಸವಗಳಲ್ಲಿ ವ್ಯವಸ್ಥಿತವಾಗಿ ಭಾಗವಹಿಸಿ ಭಗವಂತನ ಗುಣಗಾನ ಮಾಡಿ



ಉಪನ್ಯಾಸಮಾಡುತ್ತಾ

ಶ್ರೀ ನಾಗಸಂಪಿಗಿ, ಮೈಸೂರು

ಧನ್ಯವಾದವು. ಎಂಟು ಸಂಘಗಳ - ಮೂರು ಗುಂಪುಗಳಾಗಿ ಇಪ್ಪತ್ನಾಲ್ಕು ಭಜನಸಂಘಗಳು ಒಂದೊಂದೂ ಬ್ರಹ್ಮೋತ್ಸವದಲ್ಲಿ ಮೂರು ಮೂರು ದಿನಗಳಂತೆ ಭಾಗವಹಿಸಿದವು. ದಿನವೂ ನಸುಕಿನಲ್ಲಿ ಎದ್ದು ಹರಿದಾಸರ ಸಮವಸ್ತ್ರವಾದ ಹಳದಿಯ ಉಡುಗೆಯಲ್ಲಿ ತಾಳ ತಂಬೂರಿಗಳೊಂದಿಗೆ ಸಂಕೀರ್ತನ ಸೇವೆ ಸಲ್ಲಿಸುತ್ತ ನಗರ ಪ್ರದಕ್ಷಿಣೆ ಮಾಡಿದ್ದೇ ಅಲ್ಲದೆ, ಎರಡನೆಯ ಹಂತದಲ್ಲಿ ದಿನವೂ ಬೆಳಗ್ಗೆ ಸಂಜೆಗಳಲ್ಲಿನ ವಾಹನೋತ್ಸವಗಳ ಮೆರವಣಿಗೆಯಲ್ಲಿ ಹರಿಯನ್ನು ಸ್ವಾಗತಿಸುವ ಭಜನ ಗೋಷ್ಠಿಗಳು, ಕೋಲಾಟ, ಹರಿದಾಸ ವೇಷದಲ್ಲಿ ಕೀರ್ತನೆ, ಘೋಷ, ಕಾರ್ಯಕ್ರಮಗಳಲ್ಲಿಯೂ ಯಶಸ್ವಿಯಾಗಿ ಶಿಸ್ತಿನಿಂದ ಭಾಗವಹಿಸಿದ್ದವು. ಪ್ರತ್ಯೇಕ ಆಕರ್ಷಣೆಯೆಂದರೆ ಈ ಮೆರವಣಿಗೆಗಳಲ್ಲಿ ಭಾಗವಹಿಸಿದ ಮಕ್ಕಳು. ವಿವಿಧ ವೇಷಗಳನ್ನು ಧರಿಸಿ ಹರಿದಾಸರ ಹಾಡುಗಳಿಗೆ ಚಾಲನೆಯ ರೂಪವನ್ನು ಕೊಟ್ಟ ಈ ಮಕ್ಕಳ ಸಾಮೂಹಿಕ ನೃತ್ಯ ಗೀತಗಳು ಬ್ರಹ್ಮೋತ್ಸವದ ವೀಕ್ಷಕರನ್ನೇ ಅಲ್ಲದೆ ದೇವತೆಗಳನ್ನೂ ಆಕರ್ಷಿಸುವಂತಿದ್ದವೆಂದು ಪತ್ರಿಕೆಗಳು ವರದಿ ಮಾಡಿದವು.

ಹರಿದಾಸ ಸಾಹಿತ್ಯದ ನರುಗಂಪು ತಿರುಮಲೆಯ ತಿರುವೀಧಿಗಳಲ್ಲಿ ಹರಡಿದ್ದಷ್ಟೇ ಅಲ್ಲದೆ,

# ನವರಾತ್ರಿ ಬ್ರಹ್ಮೋತ್ಸವದಲ್ಲಿ ಭಾಗವಹಿಸಿದ

# ಭಜನ ಮಂಡಳಿಗಳು

## 10-10-99 ರಿಂದ 19-10-99

1. ವಾಯುಜೀವೋತ್ತಮ ಭಜನ ಮಂಡಳಿ, ಬೆಂಗಳೂರು.
2. ನೀಲಕಂಠೇಶ್ವರ ಭಜನ ಮಂಡಳಿ, ಉಡುಪಿ.
3. ಗುರುರಾಜ ಮಹಿಳಾ ಭಜನ ಮಂಡಳಿ, ಯಾದಗಿರಿ.
4 ವಿಜಯ ವಿಠಲ ಮಹಿಳಾ ಭಜನ ಮಂಡಳಿ, ಸಿರುಗುಪ್ಪ
5. ಪ್ರಹ್ಲಾದರಾಜ ಭಜನ ಮಂಡಳಿ, ನಾರಾಯಣಪೇಟೆ.
6 ಪರಿಮಳ ಸಾಂಸ್ಕೃತಿಕ ಭಜನ ಮಂಡಳಿ, ಹೈದರಾಬಾದ್
7 ರಘುಪ್ರೇಮ ಭಜನ ಮಂಡಳಿ, ಆದೋನಿ
8. ರಾಮಚಂದ್ರ ಭಜನ ಮಂಡಳಿ, ಗಂಗಾವತಿ.
9 ಪುರಂದರದಾಸ ಭಜನ ಮಂಡಳಿ, ಮುಂಬಯಿ.
10. ಹರೇ ಶ್ರೀನಿವಾಸ ಭಜನ ಮಂಡಳಿ, ಗುಂಟೂರು.
11. ಗುರುಗೋವಿಂದ ವಿಠಲ ಭಜನ ಮಂಡಳಿ ಗುಲ್ಬರ್ಗ
12 ಹರೇ ಶ್ರೀನಿವಾಸ ಭಜನ ಮಂಡಳಿ, ರಾಜಮಂಡ್ರಿ.
13. ಹರಿಪ್ರಿಯ ಭಜನ ಮಂಡಳಿ, ಕೊಲ್ಹಾಪುರ.
14 ಪಾಂಡುರಂಗಿ ಭಜನ ಮಂಡಳಿ, ಮೈಸೂರು
15 ನಂದ ಕಿಶೋರ ಭಜನ ಮಂಡಳಿ, ದಾವಣಗೆರೆ.
16. ಜಗನ್ನಾಥ ದಾಸ ಭಜನ ಮಂಡಳಿ, ಜಕ್ಕಸಂದ್ರ.
17 ಪರಿಮಳ ಭಜನ ಮಂಡಳಿ, ಕೊಲ್ಹಾಪುರ.
18. ಶಿವಕನ್ಯಾ ಬಾಲಿಕಾ ವೃಂದ, ದಾವಣಗೆರೆ.
19. ಪೂರ್ಣ ಪ್ರಜ್ಞಯುವಕ ಸಂಘ, ಭದ್ರಾವತಿ
20 ಅ.ಭಾ.ಮಾ.ಮ. ಭಜನ ಮಂಡಳಿ, ಮುಂಬಯಿ
21. ಮಹಾಲಕ್ಷ್ಮಿ ಭಜನ ಮಂಡಳಿ, ಡೊಂಬಿವಲಿ
22 ಸುಂದರ ನಗರ ಭಜನ ಮಂಡಳಿ, ಬೆಂಗಳೂರು.
23 ಜಾಹ್ನವಿ ಭಜನ ಮಂಡಳಿ, ಬೆಂಗಳೂರು.
24 ಸುಮಧ್ವ ಸಂಘ, ಬೆಂಗಳೂರು



ಬ್ರಹ್ಮೋತ್ಸವದ ಸಮಯದಲ್ಲಿ ತಿರುಮಲೆಯ ಆಸ್ಥಾನ ಮಂಟಪದಲ್ಲಿನ ತನ್ನ ಕಾವ್ಯ ಧರ್ಮದಿಂದಲೂ, ಧರ್ಮದಿಂದಲೂ, ಆಕರ್ಷಿಸಿತು ಕೊಪ್ಪಳದ ಶ್ರೀ ರಘುಪ್ರೇಮಾಚಾರ್ಯ, ಉಡುಪಿಯ ಶ್ರೀ ಸಗ್ರಿ ರಾಘವೇಂದ್ರ ಉಪಾಧ್ಯ, ತಿರುಪತಿಯ ಶ್ರೀ ಡಿ ಪ್ರಹ್ಲಾದಾಚಾರ್ಯ, ಮುಂಬಯಿನ ಶ್ರೀಮತಿ ತೇಜಸ್ವಿನಿ ಪಿ ಆರ್ ನಾಗರಹಳ್ಳಿ ಮೊದಲಾದವರು ಪ್ರಥಮ ಬ್ರಹ್ಮೋತ್ಸವದಲ್ಲಿಯೂ, ಬೆಂಗಳೂರಿನ ಶ್ರೀ ಹರಿದಾಸಭಟ್, ಉಡುಪಿಯ ಶ್ರೀ ಅನಂತಕೃಷ್ಣಾಚಾರ್ಯ, ಬೆಂಗಳೂರಿನ ಶ್ರೀ ರಾಮ ವಿಠಲಾಚಾರ್ಯ, ಬೆಂಗಳೂರಿನ ಶ್ರೀ ಖೇಡ ಕೃಷ್ಣಾಚಾರ್ಯ, ಮೈಸೂರಿನ ಶ್ರೀ ಎ ನಾಗಸಂಪಿಗೆ ಅವರುಗಳು ಎರಡನೆಯ ಬ್ರಹ್ಮೋತ್ಸವದಲ್ಲಿಯೂ ತಮ್ಮ ವಿದ್ವತ್ಪೂರ್ಣ ಧಾರ್ಮಿಕ ಉಪನ್ಯಾಸಗಳಿಂದ ಶ್ರೋತೃಗಳನ್ನು ಆಕರ್ಷಿಸಿ ಶ್ರೀ ಹರಿಯತ್ತ ಗಮನ ಸೆಳೆಯುವಲ್ಲಿ ಸಮರ್ಥರಾದರು

ಸ್ವಾಮಿ ಸೇವೆಯಲ್ಲಿ ಸಂಕೀರ್ತನ ಸಮರ್ಪಣೆಯೂ ನಡೆಯಿತು ಹರಿದಾಸ ಸಂಗೀತ ಸಭೆಗಳಲ್ಲಿ ಬೆಂಗಳೂರಿನ ಶ್ರೀ ಎಸ್ ಡಿ. ನಾಗೇಂದ್ರ ಶಾಸ್ತ್ರಿ, ಶ್ರೀ ಆರ್ ಎಸ್ ನಂದಕುಮಾರ್ ಅವರುಗಳು ಕರ್ನಾಟಕ ಸಂಗೀತದ ಹರಿದಾಸ ಕೀರ್ತನೆಗಳನ್ನು ಮೊದಲ ಬ್ರಹ್ಮೋತ್ಸವದಲ್ಲಿ ಸಮರ್ಪಿಸಿದರೆ ಎರಡನೆಯ ಬ್ರಹ್ಮೋತ್ಸವದಲ್ಲಿ ಬೆಂಗಳೂರಿನ ರೂಪ ಹಾಗೂ ದೀಪ ಅವರೂ ಸಂಗೀತ ಕುಲಕರ್ಣಿ (ಕಟ್ಟಿ) ಅವರೂ ಸಂಗೀತ ಸಭೆಗಳನ್ನು ನಡೆಸಿಕೊಟ್ಟರು ಜೊತೆಗೇ ಗೋಷ್ಠಿ ಗಾನಗಳೂ, ವಾದ್ಯ ಸೇವೆಗಳೂ ನಡೆದು ಧ್ವನಿವರ್ಧಕ ಜಾಲದ ಮೂಲಕ ಬೆಟ್ಟವೆಲ್ಲ ಸಂಕೀರ್ತನ ಮಯವಾಗುವಂತೆ ಏರ್ಪಾಡು ಮಾಡಲಾಗಿದ್ದು ಇಡೀ ಪರ್ವತಾವಳಿ ಹರಿಸಂಕೀರ್ತನೆಯಲ್ಲಿ ತೊಡಗಿರುವಂತೆ ಕಂಡು ಕೇಳಿ ಬಂದಿತೆಂದರೆ ಅತಿಶಯೋಕ್ತಿಯಾಗದು.

ಜೊತೆಗೇ ದಾಸಸಾಹಿತ್ಯದ ವಸ್ತು ಪ್ರದರ್ಶನವೂ ಜನವನ್ನು ಹರಿದಾಸರ ಸಂಕೀರ್ತನೆಗಳ ಕಡೆಗೆ, ಅವರ ಜೀವನ ವಿಧಾನದ ಕಡೆಗೆ ಆಕರ್ಷಿಸುವಲ್ಲಿ ಯಶಸ್ವಿಯಾಯಿತು

# ಗಾಯನ-ಭಜನೆ

- ಆದ್ಯರಾಮಾಚಾರ್ಯ.

ಭಜನೆಯ ಶಬ್ದಾರ್ಥವು ಭಗವಂತನನ್ನು ಕುರಿತು ಶ್ರದ್ಧಾಪೂರ್ವಕ ಆತನ ಲೀಲಾವಿನೋದಗಳನ್ನು ಭಕ್ತಿಯಿಂದ ತಲ್ಲೀನರಾಗಿ ಸ್ಮರಣ ಮಾಡುವುದು ಸಮೂಹ ಮಾಧ್ಯಮದಿಂದ ಮಾಡುವ ಗುಣಗಾನವು ಸಂಕೀರ್ತನವೆಂದೆನಿಸಿಕೊಳ್ಳುವುದು. ಪ್ರಾಚೀನ ವೈದಿಕ ಕಾಲದಲ್ಲಿ ವೇದಮಂತ್ರಗಳ ಭಾಗಗಳು ಹಾಗೂ ಉಪನಿಷದ್ ಭಾಗಗಳನ್ನು ಋಚಾದಿ ರೂಪಗಳಲ್ಲಿ ಹೇಳುವ ಪದ್ಧತಿ ಇತ್ತು ಪೌರಾಣಿಕ ಯುಗದಲ್ಲಿ ರಾಮಾಯಣ, ಮಹಾಭಾರತಗಳಲ್ಲಿರುವ



ಪಂಡಿತ ಶ್ರೀ ಭೀಮಸೇನ ಜೋಶಿ



ಶ್ರೀಮತಿ ಎಂ ಎಸ್ ಸುಬ್ಬಲಕ್ಷ್ಮಿ

ಶ್ಲೋಕಗಳನ್ನು ತಂಬೂರಿಯ ಧ್ವನಿಯೊಂದಿಗೆ ಸರಾಗವಾಗಿ ಹೇಳಿಕೊಳ್ಳುವ ಪದ್ಧತಿಯು ಇತ್ತು ಭಾಗವತ ಪುರಾಣವನ್ನು ತಂಬೂರಿ ಮೀಟುತ್ತ ಹೇಳುವುದು ಇಂದಿಗೂ ನಡೆದುಕೊಂಡು ಬಂದಿರುವುದುಂಟು

ಸಮಗ್ರ ಭಾರತದಲ್ಲಿ ಇಂದಿಗೂ ಸಂಗೀತದ ಅನೇಕ ಪ್ರಕಾರಗಳು ಪ್ರಚಲಿತದಲ್ಲಿವೆ ಉತ್ತರ ಭಾರತದಲ್ಲಿ ನಡೆದುಕೊಂಡು ಬಂದ ಪ್ರಕಾರಗಳಲ್ಲಿ ಜಯದೇವ ಕವಿಯಿಂದ ಅಲೌಕಿಕ ರೀತಿಯಲ್ಲಿ ರಚಿತವಾದ ಗೀತಗೋವಿಂದ ಕಾವ್ಯವು ಅಮೋಘವಾದ ರಸಧಾರೆಯಂತೆ ಸರ್ವತ್ರ ವ್ಯಾಪಿಸಿತು ಅದೇ ರೀತಿಯಲ್ಲಿ ವಿದ್ಯಾಪತಿಯಿಂದ ರಚಿತವಾದ ಕೃತಿಗಳು ಜನಮಾನಸದಲ್ಲಿ ನೆಲೆಯೂರಿ ನಿಂತವು. ಬಂಗಾಲದ ಹೊಸದೊಂದು ಭಕ್ತಿಪಂಥದ ಸಂಪ್ರದಾಯವು ಜನಮಾನಸದಲ್ಲಿ ಕಾಣುವಂತೆ ಮಾಡಿತು. ಓತಪ್ರೋತವಾಗಿ ನಡೆದುಕೊಂಡು ಬರುತ್ತಲಿದ್ದ ಈ ಭಜನಾ ಕಾರ್ಯಕ್ರಮಗಳ ಮೇಲೆ ಹೊರಭಾಗದಿಂದ ಬಂದ, ಆಕ್ರಮಣಕಾರಿಗಳಾಗಿ ಬಂದವರಿಂದ ಭಕ್ತಿಪಂಥದ ಈ ಕ್ರಾಂತಿಗೆ ಬಹು ದೊಡ್ಡ ಸಮಸ್ಯೆಗಳನ್ನೆದುರಿಸುವ ಪ್ರಸಂಗವು ಬಂದಿತು

ವಿದೇಶೀಯರ ಪ್ರಭುತ್ವದಿಂದಾಗಿ ಭಾರತೀಯ ಭಕ್ತಿಪಂಥದಲ್ಲಿ ಅನೇಕ ಬದಲಾವಣೆಗಳು ಕಾಣಬರತೊಡಗಿದವು. ವಿಶೇಷವಾಗಿ ೧೩ ನೇ ಶತಮಾನದಿಂದ ೧೭ ನೇ ಶತಮಾನದ ಕಾಲಾವಧಿಯಲ್ಲಿ ಭಾರತೀಯರ ಭಜನಾದಿ ಕಾರ್ಯಕ್ರಮಗಳಲ್ಲಿ ಅನೇಕ ಬದಲಾವಣೆಗಳು ಕಾಣಿಸಿಕೊಂಡವು. ಬಂಗಾಲದಲ್ಲಿ ಚೈತನ್ಯ ಮಹಾಪ್ರಭುಗಳು, ಮಿಥಿಲಾದಲ್ಲಿ ವಿದ್ಯಾಪತಿ, ಗುಜರಾಥದಲ್ಲಿ ನರಸಿ ಮೆಹತಾ, ರಾಜಾಸ್ಥಾನದಲ್ಲಿ ಮೀರಾಬಾಯಿ, ದಿಲ್ಲಿ, ಆಗ್ರಾ, ಅಜಮೀರ ಮೊದಲಾದ ಭಾಗಗಳಲ್ಲಿ ಅಮೀರ್ ಖುಸ್ರೋ, ಅವಧ ಪ್ರಾಂತಗಳಲ್ಲಿ ಸೂರದಾಸ ಹಾಗೂ ತುಲಸೀದಾಸ, ಕಬೀರ - ಮೊದಲಾದವರು ಈ ಸಂಗ್ರಾಮ ಯುಗದಲ್ಲಿ ಭಕ್ತಿಪ್ರಧಾನವಾದ ಅನೇಕ ಕೀರ್ತನೆಗಳನ್ನು ರಚಿಸಿದರು.

ಮಹಾರಾಷ್ಟ್ರದಲ್ಲಿ ತುಕಾರಾಮ, ರಾಮದಾಸ, ಮುಕ್ತಾಬಾಯಿ, ಚೋಖಾಮೇಳ, ಕರ್ನಾಟಕದಲ್ಲಿ ನರಹರಿತೀರ್ಥರು, ಶ್ರೀಪಾದರಾಜರು, ವ್ಯಾಸರಾಜರು, ವಾದಿರಾಜರು, ಪುರಂದರದಾಸರು, ಕನಕದಾಸರು - ಈ ಭಕ್ತಿಪಂಥದ ನೇತಾರರೆನಿಸಿಕೊಂಡರು ಆಂಧ್ರಪ್ರದೇಶದಲ್ಲಿ ಅನ್ನ



ಡಾಗರ ಬಂಧುಗಳು

ಮಾಚಾರ್ಯರು, ತ್ಯಾಗರಾಜರು, ತಮಿಳುನಾಡಿನಲ್ಲಿ ಆಂಡಾಳಮ್ಮನವರು, ಶ್ಯಾಮಾಶಾಸ್ತ್ರಿಗಳು ಮೊದಲಾದವರಿಂದ ಭಕ್ತಿಪಂಥದ ಪ್ರವಾಹವು ಕಾಣಿಸಿಕೊಂಡಿತು ತ್ಯಾಗರಾಜರಂತೂ ಕರ್ನಾಟಕ ಸಂಗೀತಕ್ಕೆ ಸಲ್ಲಿಸಿದ ಸೇವೆಯನ್ನು ಕ್ರಾಂತಿಕಾರಕ ಕೊಡುಗೆ ಎಂದು ಗುರುತಿಸುವಂತಾಯಿತು. ಭಾರತೀಯ ಸಂಗೀತದ ವಿಕಾಸದಲ್ಲಿ ರಾಗ ಪ್ರಧಾನವೆನಿಸಿಕೊಂಡಿತು ಮೂಲ ಗ್ರಾಮಗಳಿಂದ ನಾನಾ ಹಂತವನ್ನು ದಾಟಿ ಅದು ಮೇಳ ಪದ್ಧತಿಗೆ ಬಂದು ತಲುಪುವಂತಾಯಿತು ವೆಂಕಟಮುಖಿಯವರಿಂದ ೭೨ ಜನಕ ಮೇಳಗಳ ಪದ್ಧತಿಯ ಕಲ್ಪನೆಯೊಂದಿಗೆ ಸ್ವರ ಶ್ರೇಣಿಗಳ ರೂಪದಲ್ಲಿ ತ್ಯಾಗರಾಜರಿಂದ ಮುತ್ತುಸ್ವಾಮಿ ದೀಕ್ಷಿತರಿಂದ ಈ ಪದ್ಧತಿಗೆ ವಿಶೇಷ ಮೆರುಗು ಕಾಣಬರತೊಡಗಿತು ಹೊಸ ರಾಗಗಳೊಂದಿಗೆ ಗಣನೀಯ ಪ್ರಮಾಣದಲ್ಲಿ ಕೃತಿರಚನೆ ಮಾಡಿ ರಾಗಗಳ ಸೌಂದರ್ಯವನ್ನು ವಿಸ್ತರಿಸಿದರು

ಭಜನ ಗಾಯನ ಪರಂಪರೆಯಲ್ಲಿ ಸ್ವಾಮಿ ಹರಿದಾಸರು ಎಲ್ಲರಿಗಿಂತ ಪ್ರಖ್ಯಾತರೆಂದು ಉತ್ತರ ಭಾರತೀಯರು ಗುರುತಿಸತೊಡಗಿದರು. ಹಿಂದೂಸ್ತಾನಿ ಸಂಗೀತ ಗಾಯಕರೆಲ್ಲ ಅವರನ್ನು ರಚನಾಕಾರರೆಂದು ಗುರುತಿಸತೊಡಗಿದರು ಇವರ ಶಿಷ್ಯರಲ್ಲಿ ತಾನಸೇನನು ರಾಜಾಶ್ರಯದಲ್ಲಿದ್ದವನು ಆತನ ಕೃತಿಗಳೆಲ್ಲ ಹೆಚ್ಚಾಗಿ ಚಕ್ರವರ್ತಿಯನ್ನು ಸ್ತುತಿಸುವ ಕೃತಿರೂಪಗಳೆನಿಸಿಕೊಂಡವು. ಈತನ ಕಾಲದಲ್ಲಿದ್ದ ೯೨ ತಾಳಗಳನ್ನು ಕಡಿಮೆ ಮಾಡಿ ೧೨ ತಾಳಗಳನ್ನು ಪ್ರಚುರಪಡಿಸಲಾಯಿತು. ಹೊಸ ರಾಗರಾಗಿಣಿ ಸಂಗೀತದಲ್ಲಿ



ಶ್ರೀ ಬಾಲಗಂಧರ್ವ

ಸಮಾವೇಶ ಮಾಡತೊಡಗಿತು. ಉದಾಹರಣಾರ್ಥವಾಗಿ ಮಿಯಾಮಲ್‌ಹಾರ, ಮಿಯಾಸಾರಂಗ, ಮಿಯಾತೋಡಿ ಮೊದಲಾದವುಗಳನ್ನು ಇಲ್ಲಿ ಸ್ಮರಿಸಬಹುದು. ತಾನಸೇನನು ಸ್ವಾಮಿ ಹರಿದಾಸರ ಭಜನೆಗಳನ್ನು ಸಂಗೀತ ರೂಪದಲ್ಲಿ ಪರಿವರ್ತನೆಗೊಳಿಸಿದನು.

ಇದೇ ಪರಂಪರೆಯಲ್ಲಿ ಬೈಜುಬಾವರಾ ಪ್ರಸಿದ್ಧನಾಗಿದ್ದಾನೆ. ಆತನ ಮಧುರ ಕಂಠಕ್ಕೆ ಮಾರುಹೋದ ಜಿಂಕೆಗಳೂ ಸಹ ಆತನ ಮಧುರ ಕಂಠದಿಂದ ಹೊರಡುವ ಆಲಾಪದಿಂದ ಆತನನ್ನೇ ನೋಡುತ್ತ ಆಕರ್ಷಣೆಗೊಂಡು ನಿಲ್ಲುತ್ತಿದ್ದವಂತೆ. ಇದೇ ಪರಂಪರೆಯಲ್ಲಿ ವಿಲಾಸಖಾನರ ಹೆಸರನ್ನೂ ಕೂಡ ಜೋಡಿಸುತ್ತಾರೆ ತಾನಸೇನನ ಮರಣಾನಂತರ ರಾಗಿಣಿತೋಡಿಯ ರಾಗಾಲಾಪನೆ ಮಾಡತೊಡಗಿದಾಗ ಅಂತಃಕರಣ ಭಾವದಿಂದ ತಾನಸೇನನ ಸಮಾಧಿಯೂ ಸಹ ತಲೆದೂಗುವಂತೆ ಅಲುಗಾಡಿತೆಂದು ಹೇಳುತ್ತಾರೆ. ಅದನ್ನು ಗಮನಿಸಿದ ಬಾದಶಹನು ತನ್ನ ಶಿರೋಭೂಷಣ ತೆಗೆದು ವಿಲಾಸಖಾನನ ತಲೆಯ ಮೇಲಿರಿಸಿ ಸನ್ಮಾನಿಸಿದನೆಂದು ಅಕಬರನ ಜೀವನದಿಂದ ತಿಳಿದುಬರುತ್ತದೆ.

ಒಂದು ಕಾಲದಲ್ಲಿ ಮಧುರಾ, ಬೃಂದಾವನಗಳಲ್ಲಿ ಸಂಗೀತ ಹಾಗೂ ಭಜನಾದಿಗಳ ಮಹಾಸುನಾದದ ಅಲೆಗಳೇ ಕೇಳಿಬರತೊಡಗಿತು. ತುಲಸೀದಾಸರಿಂದ ರಚಿತವಾದ "ರುಮಕ ರುಮಕ ರಾಮಚಂದ್ರ ಬಾಜತ ಪೈಜನಿಯಾ" ಹಾಗೂ "ರಾಮಚಂದ್ರ ದೋರಭಯೊ ಪ್ಯಾರೇ" ಭಜನಾದಿಗಳ ನಿನಾದವು ದಶದಿಕ್ಕುಗಳಲ್ಲಿ ಕೇಳಿಬರತೊಡಗಿತು. ಅದೇ ರೀತಿ ಸೂರದಾಸರ ಕೃತಿಗಳು ಭಕ್ತರ ನಾಲಿಗೆಗಳ ಮೇಲೆ ನರ್ತಿಸತೊಡಗಿದವು. ಗುರುನಾನಕ್, ರೈದಾಸ್, ದಾದೂ ಮೊದಲಾದವರಿಂದ ರಚನೆಯಾದ ಭಜನಾದಿಗಳ ಉಲ್ಲೇಖವನ್ನೂ ಸಹ ಇಲ್ಲಿ ಮಾಡಬಹುದು. ಭಕ್ತ ಮೀರಾಬಾಯಿಯಿಂದರಚಿತವಾದ "ಮೇರೇ ತೋ ಗಿರಿಧರ ಗೋಪಾಲ ದೂಸರೋ ನ ಕೋಯಿ" ಹಾಗೂ "ಮೈ ತೋ ಗಿರಿಧರ ಆಗೆ ನಾಚೂಂಗಿ" ಗೀತೆಗಳು ಪಶ್ಚಿಮದ ಮರುಭೂಮಿಯಿಂದ ಪುಟಿದೆದ್ದು ಭಾರತೀಯರ ಜನಮಾನಸವೆಂಬ ಸರೋವರದಲ್ಲಿ ಅರಳಿದ ಕಮಲಗಳಂತೆ ಶೋಭಿಸತೊಡಗಿದವು. ಇದೇ ಪರಂಪರೆಯಲ್ಲಿ ಪಂಡಿತ್ ವಿಷ್ಣುನಾರಾಯಣ ಭಾತಖಾಂಡೆಯವರು ದಕ್ಷಿಣ ಭಾರತದ ರಾಗ ಥಾಟಗ

ಳನ್ನು ಬೆಳೆಸಿಕೊಂಡು ಉತ್ತರ ಭಾರತದ ಭಜನೆಗಳೊಂದಿಗೆ ಹೊಸ ಪರಂಪರೆಯನ್ನಾರಂಭಿಸಿದರು. ಒಂದು ರೀತಿಯಲ್ಲಿ ಭಾತಖಾಂಡೆಯವರು ಉತ್ತರ ಹಾಗೂ ದಕ್ಷಿಣ ಸಂಗೀತ ಸಾಹಿತ್ಯಕ್ಕೆ ಸೇತುವೆಯಂತಾದರು ಎಲ್ಲ ರಾಗರಾಗಿಣಿಗಳಿಗೆ ಸ್ವರಲೇಪನದ ಅಭೂತಪೂರ್ವ ಯೋಜನೆ ಮಾಡಿದರು ಭಜನ ಪದ್ಧತಿಗೆ ಬಹು ಮೂಲ್ಯದ ಯೋಗದಾನ ಮಾಡಿದರು ಪಂಡಿತ ಓಂಕಾರನಾಥ ರಾಕೂರ ಭಜನ ಗಾಯನವನ್ನು ಪ್ರಭಾಶಾಲಿಯನ್ನಾಗಿ ಮಾಡಿದರು ಪುಣೆಯ ವಿಷ್ಣು ದಿಗಂಬರರು ಉತ್ತರ ಭಾರತದ ಸಂಗೀತದ ವಿಚಾರದಲ್ಲಿ ವಿಶೇಷ ಪ್ರಭಾವ ಬೀರಿದರು. "ಚಲೋ ಮನ ಗಂಗಾ ಯಮುನಾ ತೀರ" ಎಂಬ ಅವರ ಭಜನೆಯು ಬಹು ಖ್ಯಾತಿ ಗಳಿಸಿತು. ಇವರ ಪ್ರಭಾವದಿಂದಾಗಿ ಉಸ್ತಾದ ಫೈಯಾಜ ಖಾನ್, ಬಡೇಗುಲಾಮ್ ಅಲಿಖಾನ್, ಡಾಗರ ಬಂಧುಗಳು, ಕುಮಾರ ಗಂಧರ್ವ, ಪಂ ಭೀಮಸೇನ ಜೋಷಿ, ಪಂಜನರಾಜ, ಗಂಗೂಬಾಯಿ ಹಾನಗಲ್, ಬಸವರಾಜ ರಾಜಗುರು, ಮಲ್ಲಿಕಾರ್ಜುನ ಮನ್‌ಸೂರ್ - ಮೊದಲಾದವರೆಲ್ಲ ವಚನಗಾಯನ, ಭಜನ ಗಾಯನಗಳಿಗೆ ಜೀವಕಳೆ ತುಂಬಿದರು.

ದಕ್ಷಿಣ ಭಾರತದಲ್ಲಿ ಕರ್ನಾಟಕ ಸಂಗೀತದಲ್ಲಿ ಪ್ರಖ್ಯಾತ ಗಾಯಕಿ ಎಂದೆನಿಸಿದ ಶ್ರೀಮತಿ ಎಂ ಎಸ್ ಸುಬ್ಬುಲಕ್ಷ್ಮಿಯವರಂತೂ ಭಜನ ಗಾಯನದಲ್ಲಿ ಉಲ್ಲೇಖನೀಯ ಕಾರ್ಯಮಾಡಿದರು ಗಾಂಧೀಜೀಯವರಿಗೆ ಬಹುಪ್ರಿಯವಾದ "ವೈಷ್ಣವ ಜನತೋ ತೇನೇ ಕಹಿಯೇ ಪ್ರೀತ ಪರಾಯಿ ಜಾನರೆ" - ಈ ಗೀತವು ಅವರ ಕಂರದಿಂದ ಹೊರಹೊಮ್ಮಿದಾಗ ಶ್ರೋತೃಗಳು ಮಂತ್ರಮುಗ್ಧರಾಗಿ ಕೇಳತೊಡಗಿದರು. ಅವರ ಮಧುರ ಕಂರವಂತೂ ಭಾಷೆಯ ಸೀಮಾರೇಖೆಯನ್ನೇ ದಾಟಿತು. ಸುಬ್ಬುಲಕ್ಷ್ಮಿಯವರ ಮೀರಾ ಭಜನೆಗಳು ಭಾರತೀಯರ ಮನವನ್ನು ಹಾಲುಗಡಲಿನಲ್ಲಿ ತೇಲುವಂತೆ ಮಾಡಿದವು. ಕೆ.ಸಿ.ಡೆ ಹಾಗೂ ಜೂತಿಕಾ ರಾಯ ಇವರ ಗೀತಗಳು ಲೋಕಪ್ರಿಯಗೊಂಡವು. ಇದೇ ಸಂದರ್ಭದಲ್ಲಿ ಲತಾಮಂಗೇಶಕರ ಇವರನ್ನು ಸ್ಮರಿಸದಿರುವುದು ಬಹು ದೊಡ್ಡ ಅಪಚಾರವೆನಿಸುವುದು. ಕಿಶನ ಸಿಂಗರ **"ಖೇಲೂ ಹೋಲಿ ಮೇಲೇ ರಾಕೇ ಗಿರಿಧರ ಗೋಪಾಲ"** ಎಂಬ ಅವರ ಭಜನೆ ಬಹು ಹೃದಯಸ್ಪರ್ಶವಾದ ಭಜನೆಗಳೆನಿಸಿಕೊಂಡವು.

ಅದೇ ರೀತಿ ಚಲನಚಿತ್ರ ಗಾಯಕರಲ್ಲಿ ಮಹಮ್ಮದ ರಫಿ, ಮನ್ನಾಡೆ, ಮುಖೇಶ್ ಇವರು ಹಾಡಿದ ಭಜನೆಗಳೂ-ಲೋಕಪ್ರಿಯವಾದವು.

ಶಾಸ್ತ್ರೀಯ ಸಂಗೀತದೊಂದಿಗೆ ಭಜನ ಗಾಯನದಲ್ಲಿ ಲೋಕಗೀತೆಯನ್ನು ಮಿಶ್ರಣ ಮಾಡಿ ನೃತ್ಯಾಭಿನಯದೊಂದಿಗೆ ಪ್ರದರ್ಶನ ಮಾಡುವ ಪ್ರಥೆಯು ಆರಂಭಗೊಂಡಿತು. ಈ ಕ್ಷೇತ್ರದಲ್ಲಿ ಕರ್ನಾಟಕ ರಾಜ್ಯದ ಕುಮಾರಗಂಧರ್ವರ ಪಾತ್ರವು ಬಹು ಮಹತ್ವದ್ದಾಗಿರುವುದು. ಅವರ ಲೋಕಗೀತದಲ್ಲಿ ಗ್ವಾಲಿಯರ್ ಘರಾಣೆಯ ನಾಜೂಕುತನದ ಹೊಳವು ಜಯಪುರ ಘರಾಣೆಯ ಶಾಲೀನತೆ ಹಾಗೂ ಕಿರಾನಾ ಘರನಾದ ನಾದಶುದ್ಧತೆ ಸಮನ್ವಯವು ಕಾಣಿಸಿಕೊಂಡಿತು. ರಾಗ ಅಹಿ ಮೋಹಿನಿ, ಮಾಲವತಿ ಸಹೇಲಿ ತೋಡಿ, ಲಗ್ನಗಾಂಧಾರ - ಮೊದಲಾದ ರಾಗಗಳ ನಿರ್ಮಾಪಕರೆನಿಸಿಕೊಂಡರಲ್ಲದೆ, ಅವುಗಳಿಗೆಲ್ಲ ಹೊಸ ಅರ್ಥವನ್ನು ಕಲ್ಪಿಸಿದರು. ಅವರ "ಶಿವ ಶಿವ ಕಲ್ಯಾಣಕಾರಿ" ಎಂಬ ಭಜನೆಯು ಶ್ರೋತೃಗಳ ಮನವನ್ನು ಭಕ್ತಿಸಾಗರದಲ್ಲಿ ತೇಲಾಡುವಂತೆ ಮಾಡಿತು. ಶಾಸ್ತ್ರೀಯ ಶೈಲಿಯಲ್ಲಿ ಲೋಕಗೀತಗಳನ್ನಳವಡಿಸಿದ ಅವರ ಈ ಪ್ರಯತ್ನದಿಂದಾಗಿ ಕುಮಾರ ಗಂಧರ್ವರ ಹೆಸರು ಅಜರಾಮರವಾಯಿತು.

ಪಂಡಿತ ಭೀಮಸೇನ ಜೋಶಿಯವರಂತೂ ಮರಾರಿ ಹಿಂದಿ ಹಾಗೂ ಕನ್ನಡ ಭಕ್ತಿ ಸಂಗೀತ ಸಾಹಿತ್ಯದಲ್ಲಿ ಅಭೂತಪೂರ್ವ ಹೆಸರನ್ನು ಮಾಡಿದರು. "ಲಕ್ಷ್ಮೀನಾಥ, ದೀನನಾಥ, ಪದ್ಮನಾಥ ಸುಖಸೇ ತೂ ಹಿ ಪಾಹಿ" "ಕಂಗಳಿದ್ಯಾತಕೋ ಕಾವೇರಿ ರಂಗನ ನೋಡದ" ಮೊದಲಾದ ಹರಿದಾಸರ ಕೀರ್ತನೆಗಳು ಹಾಗೂ ಅಭಂಗಗಳು ಬಹು ಜನಪ್ರಿಯ ಕೃತಿಗಳೆನಿಸಿಕೊಂಡವು. ಪಂಡಿತ ಜಸರಾಜರೂ ಸಹ ಇದೇ ಪರಂಪರೆಯನ್ನನುಸರಿಸಿದರು.

ಕಿಶೋರಿ ಅಮೋನ್‌ಕರ್ ಜಯಪುರ ಘರಾಣೆಯ ಮಹಾನ್ ಗಾಯಕಿ ಎಂದೆನಿಸಿಕೊಡವರು. ಅವರು ಯಾವುದೇ ಬಂಧನದಲ್ಲಿ ಸಿಲುಕಿಕೊಂಡವರಲ್ಲ. ಪ್ರತಿಯೊಂದು ರಾಗವನ್ನು ತಮ್ಮದೇ ಆದ ಶೈಲಿಯಲ್ಲಿ ಹಾಡುವುದು ಅವರ ವಿಶೇಷ ಪದ್ಧತಿಯೆನಿಸಿಕೊಂಡಿತು ರಾಗ ಭೂಪ ಕೇದಾರ, ಧನಶ್ರೀ - ಮೊದಲಾದ ರಾಗಗಳೊಂದಿಗೆ "ಪ್ರಥಮ ಪುರುಷ ನಾರಾಯಣ" ಎಂಬ ಗೀತವನ್ನು ಹಾಡತೊಡಗಿದಾಗ ಅವರ ನಾದವು ಶ್ರೋತೃಗಳ ಮನದಾಳದಲ್ಲಿ ಆಧ್ಯಾತ್ಮ ಚಿಂತನದ ಪ್ರಕಾಶವನ್ನೇ ಬೆಳಗಿಸುವಂತೆ ಮಾಡಿತು. ಉಷಾ ಅಮೋನಕರ - ಇವರೂ ಸಹ ಭಾವನಾ ಪ್ರಧಾನ ಗಾಯಕಿ ಎಂದೆನಿಸಿಕೊಂಡಿರುವರು. "ರಾಮ ಧನೂಲಾಗಿ, ಆ ಜೀವನ ಪಂಥ ನಿಹಾ ಯೋಗಿ" ಮೊದಲಾದ ಇವರ ಭಜನೆಗಳು ಬಹು ಜನಪ್ರಿಯವಾದ ಕೃತಿಗಳೆನಿಸಿದವು.

ಆಧುನಿಕ ಕಾಲದ ಭಜನ ಶ್ರೋತೃಗಳಿಗೆ ಹರಿ ಓಂ ಶರಣರ ಹೆಸರು ತಿಳಿಯದ ಮಾತೇನಲ್ಲ.



ಶ್ರೀ ಅನೂಪ್ ಝಲೋಟ

"ಮನ ಮೈಲಾ ಔರ್ ತನ ಮೈಲಾ, ರಂಗೀ ಚದರಿಯಾ" ಮೊದಲಾದ ಗೀತಗಳು ಕರ್ಣಾನಂದವನ್ನುಂಟು ಮಾಡುವಂತಹವು. ಅದೇ ರೀತಿ ನರೇಂದ್ರ ಚಂಚಲರ "ಚಲೋ ಬುಲಾವಾ ಆಯಾ ಹೈ" ಗೀತವಂತೂ ಜಗನ್ಮಾತೆಯ ದಿವ್ಯ ಸಾನ್ನಿಧ್ಯವನ್ನು ಸಮೀಪಿಸಿದಂತೆ ಭಕ್ತರಿಗೆ ಪ್ರೇರಣೆಯನ್ನೀಯುವಂತಹದು. ಇವರಂತೆ ವಸುದಾಸ, ಅನುರಾಧಾ ಪೇರವಾಲ, ಪರವೀನ್ ಸುಲ್ತಾನಾ, ಶರ್ಮಾಬಂಧು, ಮಿಶ್ರಬಂಧು, ಸಿಂಹಬಂಧು, ಅಲೋಕ ಗಂಗೂಲಿ, ಪ್ರೀತಿಸಾಗರ್ - ಮೊದಲಾದವರು ಹಿಂದೀ ಭಜನಾಕ್ರಮದಲ್ಲಿ ವಿಶೇಷ ಸ್ಥಾನವನ್ನು ಹೊಂದಿದ್ದಾರೆ (ಭಜನಗಾಯನದ ನಿರ್ಮಲ ಗಂಗೆಯನ್ನೇ ಭರತಭೂಮಿಯಲ್ಲಿ ಹರಿಸುತ್ತ ಜನಪ್ರಿಯರಾಗಿರುವ ಅನೂಪ ಝಲೋಟಾ ಅವರನ್ನು ಮರೆಯುವಂತಿಲ್ಲ. ವಾಣಿ ಜಯರಾಂ ಹಾಗೂ ಅನುರಾಧಾ ಪೌಡ್ವಾಲ್ ಅವರುಗಳ ಭಜನ ಗಾಯನ ಸೇವೆಯೂ ಅನುಪಮ ಆದದ್ದೇ ಹೌದು) ಕನ್ನಡ ನಾಡಿನಲ್ಲಿಯೂ ಸಹ ಅನೇಕ ತರುಣರು ದಾಸರ ಪದಪದ್ಯಗಳು ಹಾಗೂ ವಚನಗಳನ್ನು ನಾನಾ ರಾಗಗಳಲ್ಲಿ ಹಾಡಿ ಧ್ವನಿಸುರುಳಿಗಳನ್ನು ಹೊರತರತೊಡಗಿರುವರು. ಈ ಪರಂಪರೆಯು ಸಮಗ್ರ ಭಾರತದಲ್ಲಿ ಒಂದಿಲ್ಲೊಂದು ಪ್ರಕಾರಗಳಲ್ಲಿ ರಾಗತಾಳ ಮೇಳಗಳೊಂದಿಗೆ ಭಾವಪ್ರಧಾನ ರೂಪದಲ್ಲಿ ಹೊರಹೊಮ್ಮಿ ಬಂದು ಭಕ್ತರ ಹೃದಯವನ್ನು ತಣಿಸುತ್ತಲಿರುವುದು. ಆಧ್ಯಾತ್ಮ ಚಿಂತನೆಯತ್ತ ಮನವು ಚಲಿಸುವಂತೆ ಮಾಡುತ್ತಿರುವುದು ಬಹು ಸಮಾಧಾನದ ವಿಷಯವಾಗಿರುವುದು.





## ಶ್ರೀ ವೆಂಕಟೇಶ್ವರ ಸಹಸ್ರನಾಮ ಸ್ತೋತ್ರ ಸಮರ್ಪಣೆ

ತಿ. ತಿ. ದೇವಸ್ಥಾನಗಳ ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದ ಶ್ರೀ ವೇದವ್ಯಾಸ ಆನಂದ ಭಟ್ಟರ್ ಗಾಯನ ಮಾಡಿದ ಶ್ರೀ ವೆಂಕಟೇಶ್ವರ ಸುಪ್ರಭಾತ, ಶ್ರೀ ವೆಂಕಟೇಶ್ವರ ಗದ್ಯ, ಶ್ರೀ ವೆಂಕಟೇಶ್ವರ ಸಹಸ್ರನಾಮ ಸ್ತೋತ್ರಗಳನ್ನು ಹೊಂದಿದ ಮಾಸ್ಟರ್ ಡಿಜಿಟಲ್ ಕ್ಯಾಸೆಟ್ ಅನ್ನು ಸರ್ವ ಹಕ್ಕುಗಳೊಂದಿಗೆ ಸ್ವಾಮಿಗೆ ಸಮರ್ಪಿಸಿದ್ದಾರೆ. ನೆಲ್ಲೂರು ನಿವಾಸಿ ಶ್ರೀ ಆನಂದರಾವು, ಶ್ರೀ ವೇದವ್ಯಾಸ ಆನಂದ ಭಟ್ಟರೊಡನೆ ಸೇರಿ 25 ಸಾವಿರ ರೂಪಾಯಿಗಳ ವೆಚ್ಚದಲ್ಲಿ ಈ ಕ್ಯಾಸೆಟ್ ಅನ್ನು ರೂಪಿಸಿದರು.

1999 ರ ಅಕ್ಟೋಬರ್ 1 ರಂದು ಸ್ವಾಮಿ ಆಲಯದ ಶ್ರೀರಂಗನಾಯಕ ಮಂಟಪದಲ್ಲಿ ಈ ಕ್ಯಾಸೆಟ್ ಅನ್ನು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳಿಗೆ ನೀಡಲಾಯಿತು. ಈ ಕ್ಯಾಸೆಟ್‌ನ ಪ್ರತಿಗಳನ್ನು ತಯಾರಿಸಲು ಐದುಸಾವಿರ ರೂಪಾಯಿಗಳ ನಗದು ಹಣವನ್ನೂ ಸಹ ಶ್ರೀ ಆನಂದ ಭಟ್ಟರ್ ಕಾರ್ಯನಿರ್ವಹಣಾಧಿಕಾರಿಗಳಿಗೆ ಸಮರ್ಪಿಸಿದರು. ಈ ಕಾರ್ಯಕ್ರಮದಲ್ಲಿ ತಿರುಮಲೆಯ ಜೆ.ಇ.ಓ ಶ್ರೀ ಬಾಲಸುಬ್ರಹ್ಮಣ್ಯಂ, ಪಿ.ಆರ್.ಓ ಶ್ರೀ ಸುಭಾಷ್‌ಗೌಡ್ ಮೊದಲಾದವರು ಭಾಗವಹಿಸಿದ್ದರು.

## ವೈಭವದ ವರುಣ ಜಪ

ತಿರುಪತಿ ತಿರುಮಲೆ ದೇವಸ್ಥಾನಗಳ ನೇತೃತ್ವದಲ್ಲಿ ಐದು ದಿನಗಳ ಕಾಲ ತಿರುಪತಿಯ ಕಪಿಲತೀರ್ಥದಲ್ಲಿ ವರುಣ ಜಪ ವೈಭವದಿಂದ ಸಾವಿರಾರು ಭಕ್ತರ ಭಾಗವಹಿಸುವಿಕೆಯಿಂದ ಶೋಭಾಯಮಾನವಾಗಿ ಅಕ್ಟೋಬರ್ 11 ರಿಂದ ನಡೆಯಿತು.

ಆಲಯದ ಉತ್ಸವ ಮೂರ್ತಿಗಳಿಗೆ ವೈಭವದಿಂದ ವೈದಿಕ ಪೂಜೆಗಳಾದ ಮೇಲೆ ವೇದಮಂತ್ರೋಕ್ತವಾಗಿ ಎಂಟುಮಂದಿ ಋತ್ವಿಕರು ಕಪಿಲತೀರ್ಥದ ಜಲದಲ್ಲಿ ನಿಂದು ವರುಣ ಜಪವನ್ನು ಮಾಡುತ್ತಿರಲು ಆಲಯದ ಯಾಗಶಾಲೆಯಲ್ಲಿ ಎಂಟುಮಂದಿ ಯಜ್ಞದ ಹೋಮ ಹವನಾದಿ ಕ್ರಿಯೆಗಳನ್ನು ನಿರ್ವಹಿಸಿದರು. ಬೆಳಗ್ಗೆಗಳಲ್ಲಿ ಈ ರೀತಿ ಹೋಮಗಳು ನಡೆದು ಪೂರ್ಣಾಹುತಿ ನಡೆದ ಮೇಲೆ ಸಂಜೆಗಳಲ್ಲಿ ವಿಷ್ಣುಸಹಸ್ರನಾಮ ಪಾರಾಯಣ ಮೊದಲಾದ ಸ್ತವನ ಪೂಜಾ ಕಾರ್ಯಕ್ರಮಗಳು ನಡೆದವು. ವರುಣಜಪದಲ್ಲಿ ತಿರುಪತಿಯ ಜೆ.ಇ.ಓ ಶ್ರೀ ರಾಮಕೃಷ್ಣಯ್ಯ, ಡಿ.ಇ.ಓ. ಶ್ರೀರಂಗನಾಥಾಚಾರಿ, ಎ.ಇ.ಓ. ಶ್ರೀ ಭಕ್ತವತ್ಸಲಂ ಪಾಲುಗೊಂಡಿದ್ದರು.


Edited and Published on behalf of TT Devasthanams by Dr. N S Rama Murthy, M A and Printed at TTD Press by M Lakshmana Rao, M A, LPT, Manager, TTD Press, Tirupati - 517 507

# ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಟ್ರಸ್ಟ್

ತಿ. ತಿ. ದೇವಸ್ಥಾನಗಳ ಪರಿಪಾಲನಾ ಭವನ, ಕೆ. ಟಿ. ರಸ್ತೆ, ತಿರುಪತಿ, (ಆಂ.ಪ್ರ.),

(ನೋಂದಣಿ ಸಂಖ್ಯೆ - 18/94)

**ಡಾ|| ಐ. ವಿ. ಸುಬ್ಬಾರಾವ್**, ಐ.ಎ.ಎಸ್,

ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ದಾನಿಗಳೆ;

ಅನ್ನದಾನಕ್ಕಿಂತ ಇನ್ನು ದಾನಗಳಿಲ್ಲ. ನಮ್ಮದೇಶದಲ್ಲಿ ಅಗತ್ಯವಿದ್ದವರಿಗೆ, ಹಸಿದವರಿಗೆ ಅನ್ನದಾನ ಮಾಡುವುದು ಒಂದು ಸೇವೆ ಮಾತ್ರವೇ ಅಲ್ಲ, ವೇದಕಾಲದಿಂದಲೂ ಪರಂಪರೆಯಾಗಿ ಆಚರಣೆಯಲ್ಲಿರುವ ಪವಿತ್ರ ಕಾರ್ಯವಾಗಿದೆ. ಅನ್ನದಾನ ಮಾಡುವವರು ದೇವತೆಗಳ ಸಮರಾಗುವರೆಂದು ಹೇಳಲಾಗಿದೆ.

ತಿರುಮಲೆಗೆ ಆಗಮಿಸುವ ಯಾತ್ರಿಕರಿಗೆ ಉಚಿತವಾದ ಹಾಗೂ ಆರೋಗ್ಯಕರವಾದ ಭೋಜನವನ್ನು ನೀಡುವ ಉದ್ದೇಶದಿಂದ ಶ್ರೀ ವೆಂಕಟೇಶ್ವರ ಅನ್ನದಾನ ಟ್ರಸ್ಟ್ 1985 ರಲ್ಲಿ ತಿ ತಿ. ದೇವಸ್ಥಾನಗಳಿಂದ ಆರಂಭವಾಯಿತು. ಇದಕ್ಕೆ ಭಾರತದ ಎಲ್ಲೆಡೆಗಳಿಂದಲೂ ದಾತರ ಉತ್ಸಾಹಪೂರ್ಣವಾದ ಬೆಂಬಲ ಕಂಡುಬಂದಿದೆ.

## ಈ ಯೋಜನೆಯ ವಿವರಗಳು

I ವ್ಯಕ್ತಿ, ಸಂಘ, ಸಂಸ್ಥೆಗಳವರು ವೈಯಕ್ತಿಕವಾಗಿ ಅಥವಾ ಎರಡೆರಡು ಸಂಘ ಸಂಸ್ಥೆಗಳು ಐದುಲಕ್ಷ ರೂಪಾಯಿ ಅಥವಾ ಅದರ ಗುಣಕಗಳಲ್ಲಿ ದಾನ ಮಾಡಬಹುದು

1 ದಾನಿಗಳ ಹೆಸರನ್ನು ಎದ್ದು ಕಾಣುವಂತೆ ಉಚಿತ ಭೋಜನದ ಕೋಣೆಗಳಲ್ಲಿ ಬರೆಸಿಡಲಾಗುವುದು.

2. ಸ್ವಾಮಿಯ ಓಲಗದಲ್ಲಿ ದಾನಿಗಳ ಗೋತ್ರವನ್ನು, ಹೆಸರನ್ನು ಆವರ್ತನ ಪದ್ಧತಿಯಲ್ಲಿ ಹೇಳಲಾಗುವುದು.

3. ದಾನಿಗಳಿಗೆ ವರ್ಷಕ್ಕೆ ಒಮ್ಮೆ ಮೂರುದಿನಗಳಕಾಲ ತಿರುಮಲೆಯಲ್ಲಿ ಉಚಿತ ಸುಸಜ್ಜಿತ ವಸತಿ ನೀಡಲಾಗುವುದು.

4 ಈ ಮೂರು ದಿನಗಳಲ್ಲಿಯೂ, ದಾನಿಯ ಐದುಮಂದಿಗೆ ಉಚಿತವಾಗಿ ಆರತಿ ಸಹಿತ ದರ್ಶನವನ್ನು ಏರ್ಪಡಿಸಲಾಗುವುದು.

5. ದಾನಿಗಳಿಗೆ ಒಮ್ಮೆ ಮಾತ್ರವೇ ಸ್ವಾಮಿಯ ಹಾಗೂ ಅಮ್ಮನವರ ಬಂಗಾರದ ಮುಲಾಮಿನ ಪ್ರತಿಮೆಗಳ ಜ್ಞಾಪಿಕೆಯನ್ನು ನೀಡಲಾಗುವುದು.

6. 80 (ಜಿ) ಕಲಮು ಹೇಳುವಂತೆ ಈ ದಾನವು ಆದಾಯಕರ ಮುಕ್ತವಾಗಿರುತ್ತದೆ.

ದಾನಿಯು ನೀಡುವ ಹಣಕ್ಕೆ ಸಮನಾದ ಹಣವನ್ನು ತಿ.ತಿ.ದೇ. ತಮ್ಮ ವತಿಯಿಂದ ಸೇರಿಸಿ ಇಡೀ ಮೊತ್ತವನ್ನು ಬ್ಯಾಂಕಿನಲ್ಲಿ ಠೇವಣಿಯಾಗಿಟ್ಟು ಅದರ ಮೇಲಿನ ಬಡ್ಡಿ ಹಣವನ್ನು ಮಾತ್ರವೇ ಪ್ರತಿನಿತ್ಯ 15,000 ಮಂದಿಗೆ ಉಚಿತ ಭೋಜನ ನೀಡಲು ಬಳಸಲಾಗುವುದು.

II. ಎಸ್.ವಿ. ನಿತ್ಯಾನ್ನದಾನಯೋಜನೆ ತಮ್ಮ ವಂತಿಗೆಯಾಗಿ ಒಂದುಸಾವಿರ ರೂಪಾಯಿ ಅಥವಾ ಅದರ ಗುಣಕಗಳಲ್ಲಿ ವಂತಿಗೆಯನ್ನು ನೀಡಿ 80 (ಜಿ.) ಕಲಮಿನನ್ವಯ ಆದಾಯಕರ ವಿಮುಕ್ತಿಯನ್ನು ಪಡೆಯಿರಿ.

## ದಾನಗಳನ್ನು ಹೇಗೆ ಕಳುಹಿಸಬೇಕು :

ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ "ಶ್ರೀ ವೆಂಕಟೇಶ್ವರ ನಿತ್ಯಾನ್ನದಾನ ಟ್ರಸ್ಟ್" ಹೆಸರಿನಲ್ಲಿ ಡಿ.ಡಿ. ಯನ್ನು ಪಡೆದು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ., ತಿರುಪತಿ, ಆಂಧ್ರಪ್ರದೇಶ. ಇವರಿಗೆ ಕಳುಹಿಸಬೇಕು

ಹೆಚ್ಚಿನ ಮಾಹಿತಿಗಾಗಿ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇ ಪರಿಪಾಲನಾಭವನ - ತಿರುಪತಿ - 517 501.

ನಿತ್ಯಾನ್ನದಾನ ಯೋಜನೆಯಲ್ಲಿ ಭಾಗವಹಿಸಿರಿ.

ಉತ್ತಮ ಉನ್ನತ ಸೇವೆಯಲ್ಲಿ ಪಾಲುದಾರರಾಗಿರಿ.

